Koravanji

# ಕೊರವಂಜಿ

ಮಾರ್ಚಿ ೧೯೫೨



ಸಂಪಾದಕರು :

ಶ್ರೀ॥ ರಾ. ಶಿ.

ಬರಹಗಾರರು :

ಶ್ರೀ॥ ರಾಮಾಂಜುಲು
ಶ್ರೀ॥ "ಸಾಹಿತ್ಯ ಭಿಕ್ಷು"
ಶ್ರೀ॥ ಸುಬ್ಬಯ್ಯ
ಶ್ರೀ॥ ಅಮೃತ ಚನ್ನರಾಮು
ಶ್ರೀ॥ ಪಾಟೀಳ
ಶ್ರೀ॥ ಕಾಮತ್
ಶ್ರೀ॥ ರೇವಣ್ಣ
ಶ್ರೀ॥ ದಾಶರಥಿ ದೀಕ್ಷಿತ್
ಶ್ರೀ॥ ನಾರಣಪ್ಪ
ಶ್ರೀ॥ ಕುಮಾರ್

ಇತ್ಯಾದಿ, ಇತ್ಯಾದಿ.

ತಿಳಿನಗೆಯ ಮಾಸಪತ್ರಿಕೆ

ಬಿಡಿ ಪ್ರತಿ:— ಕೇವಲ [illegible]

# ಅತಿಥಿ ಸತ್ಕಾರಕ್ಕೆ ಅಮೋಘವಾದದ್ದು



ಹೇಮ:—ಏನು ಅತ್ತೆ! ನಿನ್ನೆ ನಿಮ್ಮ ಮನೆಗೆ ಬಂದ ದೊಡ್ಡ ಮನುಷ್ಯರನ್ನು ಕೇವಲ ಕುಶಲ ಪ್ರಶ್ನೆಮಾಡಿ ಕಳಿಸಿ ಬಿಟ್ರೆ' ಸ್ವಲ್ಪ ಹೊತ್ತು ಕೂಡಿಸಿ, ಕೊಂಚ ಫಲಹಾರವಾದರೂ ಪಾನೀಯವಾದರೂ ಕೊಡಲಿಕ್ಕೆ ಆಗಲಿಲ್ಲವೇ?

ಪ್ರೇಮ:—ಸಾಮಾನುಗಳ ಬೆಲೆಗಳು ಈ ಪ್ರಕಾರ ಸುಟ್ಟು ಹೋಗುತ್ತಿದ್ದಾಗ ಹ್ಯಾಗೆ ಫಲಹಾರಗಳು ಕೊಡಲಮ್ಮಾ? ಮತ್ತೂ, ಅವರು ಒಂದು ನಿಮಿಷ ಕೂಡಾ ಕೂಡಲಿಕ್ಕೆ ಟೈಮು ಇಲ್ಲ ಎಂತ ಹೇಳುತ್ತಿದ್ದರೆ ಯಾವ ಪಾನೀಯ ಕೊಡಲಿ?

ಹೇಮ:—ಅದೇನ್ರಿ! ಒಂದು ಗ್ಲಾಸು ಟಿ ತಯಾರು ಮಾಡಿ ಕೊಟ್ಟಿರಬಹುದಲ್ಲವೆ! ನಿಮಗೆ ಇದು ತಿಳಿಯಲಿಲ್ಲವೆ! ಟಿ ಬಹಳ ಸುಲಭ ಬೆಲೆಗೂ, ಬಹಳ ಶೀಘ್ರವಾಗಿಯೂ, ಶ್ರಮವಿಲ್ಲದೆಯೂ ತಯಾರು ಮಾಡಬಹುದಲ್ಲವೆ!

ಪ್ರೇಮ:—ಹೌದು ನಿಜವೇ! ಸಮಯಕ್ಕೆ ತೋರಲಿಲ್ಲ. ಎಷ್ಟು ಮಂದ ಬುದ್ಧಿ ನನ್ನದು! ಅತಿಥಿ ಸತ್ಕಾರಕ್ಕೆ ನಿಜವಾಗಿಯೂ ಟಿ ಅಮೋಘವಾದದ್ದು.

## ಮಂತ್ರ ಶಕ್ತಿ ಕೊಡುವ ಪಾನೀಯ

## —"ಟಿ" ಕುಡಿಯಿರಿ



ಕೇಂದ್ರ "ಟೀ" ಬೋರ್ಡಿನವರಿಂದ ಪ್ರಚುರಪಡಿಸಲ್ಪಟ್ಟಿದೆ





ಪ್ರತಿ ಕೆಲಸಕ್ಕೂ ಪ್ರತ್ಯೇಕವಾದ





# ಷಾಲಿಮಾರ್ ಪೆಯಿಂಟ್





ಇದೆ





ಜಾಣರು ಷಾಲಿಮಾರ್ ಪೆಯಿಂಟನ್ನೇ





ಉಪಯೋಗಿಸುತ್ತಾರೆ

SFX 83A-KN






**SHALIMAR PAINT, COLOUR & VARNISH CO., LTD.**

POST BOX 136, MADRAS 1



ಮಲೇರಿಯಾ ಅವನ

ಬದುಕನ್ನೇ

ಕೆಡಿಸಿಬಿಟ್ಟಿತು

'ಪಾಲುಡ್ರಿನ್' ಇದ್ದರೆ

ಸಾಕು ನನಗೆ ಮಲೇ

ರಿಯಾ ಭಯವೇ ಇಲ್ಲ



ಎಷ್ಟು ದಿನವಾದರೂ ಜ್ವರ ಬಿಡಲೇ ಇಲ್ಲ. ಅಬ್ಬಾ! ಏನು ಬಾಧೆ, ಏನು ಬಾಧೆ! ಆ ಬಡಪಾಯಿಗಿದ್ದ ಶಕ್ತಿಯೆಲ್ಲಾ ಉಡುಗಿಹೋಯಿತು. ಅವನ ಬಾಳೇ ಹಾಳಾಯಿತು. ಅದಕ್ಕವನೇನುಮಾಡುತ್ತಿದ್ದಾನೋ ಕಾಣೆ! ಅವನು ದಿನಕ್ಕೊಂದು ಮಾತ್ರೆಯಂತೆ 'ಪಾಲುಡ್ರಿನ್' ಪ್ರತಿ ದಿನವೂ ತೆಗೆದುಕೊಳ್ಳುತ್ತಾ ಬಂದರೆ, 3-4 ದಿನಗಳಲ್ಲೇ ಎಂದಿನಂತೆ ಆರೋಗ್ಯವಂತನಾಗಬಲ್ಲ. 'ಪಾಲುಡ್ರಿನ್' ಮಲೇರಿಯಾವನ್ನು ನಿವಾರಿಸಲೂ ಬಲ್ಲದು. ನಾನೇನೊ ಪ್ರತಿ ಭಾನುವಾರ ಊಟದ ನಂತರ, ಒಂದು 'ಪಾಲುಡ್ರಿನ್' ಮಾತ್ರೆಯನ್ನು ಬಿಡದೆ ತೆಗೆದುಕೊಳ್ಳುತ್ತಿರುವ ಕಾರಣ, ನನಗೆ ಮಲೇರಿಯಾ ಭಯವೇ ಇಲ್ಲ.




**ಪಾಲುಡ್ರಿನ್**

ಟ್ರೇಡ್ ಮಾರ್ಕ್

ಮಲೇರಿಯಾಕ್ಕೆ ಅದ್ಭುತವಾದ ಔಷಧ

• ಆಡಗೆ ಒಂದು ಮಾತ್ರೆ

ಇಂಪೀರಿಯಲ್ ಕೆಮಿಕಲ್ ಇಂಡಸ್ಟ್ರೀಸ್ (ಇಂಡಿಯಾ) ಲಿಮಿಟೆಡ್

IK-P 140 KN




ಸಂಪುಟ ೧೦ ಮಾರ್ಚ ೧೯೫೨ ಸಂಚಿಕೆ ೧೨

## ಕುಹಕಿಡಿಗಳು

★ ★

ಗುಬ್ಬಾಲೆಯವ ಶಹರಿನಲ್ಲಿದ್ದಾಗ ಅವನನ್ನ 'ಆವಾರ'ದ ಎರಡನೆ ಪ್ರದರ್ಶನಕ್ಕೆ ಕರೆದರೆ, ಆತ ಎರಡನೆ ಪ್ರದರ್ಶನದಲ್ಲಿ ನಟನಟಿಯರು ಸುಸ್ತಾಗಿರುತ್ತಾರಾಗಿ ಮೊದಲನೆ ಪ್ರದರ್ಶನಕ್ಕೇ ಹೋಗೋಣ ಎಂದನಂತೆ—

—ಈ ಕುಹಕಿಡಿಗೆ ತಂಗಳು ವಾಸನೆ ಇದೆಯಲ್ಲವೇ?

* * *

ಬರೋಡಾದ ಕೋಟಿ ರೂಪಾಯಿ ಬೆಲೆ ಬಾಳುವ ಮುತ್ತಿನ ಜಮಖಾನ ಏನಾಯ್ತು ಎಂದು ಕೇಳಿದ್ದಕ್ಕೆ ಸಚಿವ ಐಯ್ಯಂಗಾರ್ಯರು, ಅದು ನಾಲ್ಕು ಭಾಗಗಳಾಯ್ತು ಎಂದು ಹೇಳಿದರಂತೆ.

— ಮುತ್ತು ಒಡೆದರೆ ಎರಡೇ ಭಾಗ ಅಂತಿದ್ದೆವು—

* * *

ವಿವಿಧ ಪಾರ್ಟಿಗಳವರು, ಚುನಾವಣೆ ಫಲಿತಾಂಶಗಳನ್ನು ಪರ್ಯಾಲೋಚಿಸಲು ಸಭೆ ಸೇರಿಸುತ್ತಿರುವರಂತೆ.

— ರೈಲ್ವೆ ಛಾರ್ಜ್ ಕೊಟ್ಟರೇನೆ ನಾವು ಬರುವುದು ಎಂದು ಹಲವಾರು ಠೇವಣಾತಿ ಕಳಕೊಂಡ ಪಾರ್ಟಿ ಉಮೇದುವಾರರು ಒರೆದಿದ್ದಾರೆಂಬುದು ಸುಳ್ಳಂತೆ.

*　　*　　*

ದೇಶಾದ್ಯಂತ ಶಾಂತಿ ಇರಬೇಕಾದರೆ ಈಗಿನಿಂದಲೇ ನಾವು ಸಿದ್ಧತೆ ಮಾಡಿಕೊಳ್ಳಬೇಕು. (ಭಾಷಣ)

—ಆಹಾ! ಕೊರಿಯಾ ಶಾಂತಿ ಸಂಧಾನದ ಮಾದರಿ ಇದೆಯಲ್ಲಾ!

*　　*　　*

ನಮ್ಮ ಪೋಲೀಸನವರು ಈ ವರ್ಷ ಹಿಂದೆಂದೂ ಆಗದಿರುವಷ್ಟು ಹೆಚ್ಚು ತನಿಖೆಗಳನ್ನು ಯಶಸ್ವಿಯಾಗಿ ನಡೆಸಿದ್ದಾರೆ. (ಹೇಳಿಕೆ)

—ಅಂದರೆ ಈ ವರ್ಷ ಹಿಂದೆಂದೂ ಆಗದಿದ್ದಷ್ಟು ಅಪರಾಧಗಳು ಆಯಿತು ಅಂತಲ್ಲ—ಆ ಎಲ್ಲಾ ವರ್ಷಗಳ ಅಪರಾಧಗಳಿಗಿಂತಲೂ ಈ ವರ್ಷ ಪಾಪವು ಮಾಯವಾಯ್ತು ಅಂತಲೇ.

*　　*　　*

"ಡೆಕ್ಕಾನ್‌ನಲ್ಲಿ ಕ್ರಾಂತಿಯಾಗಿ ಗಲಭೆ ಆದುದು ಭಾಷಾ ಪ್ರಶ್ನೆಯ ಮೇಲೇನೇ" ಎಂದು ಸ್ವಾಮಿ ಸೀತಾರಾಮರವರು ಪಂ|| ನೆಹ್ರೂ ಅವರಿಗೆ ತಂತಿ ಕಳಿಸಿಲ್ಲವಂತೆ.

*　　*　　*

ಅಖಿಲ ಭಾರತ ರೈಲ್ವೆಯವರು ಈ ವರ್ಷ ಐವತ್ತು ಚಿಲ್ಲರೆ ಕೋಟಿ ಲಾಭ ಗಳಿಸಿದ್ದಾರಂತೆ.

—ರೈಲ್ವೆ ನೌಕರರು ಸಂಪಾದಿಸಿದ ಲಾಭವು ಈ ಅಲ್ಪ ಲೆಕ್ಕದಲ್ಲಿ ಖಂಡಿತ ಸೇರಿರಲಾರದು!

*　　*　　*

ಪ್ರಾಂತಗಳಲ್ಲಿನ ಕಾಂಗ್ರೆಸ್ ಪಕ್ಷದ ನಾಯಕರುಗಳನ್ನು ಸರ್ವಾನುಮತದಿಂದಲೇ ಆರಿಸತಕ್ಕದ್ದು, ಎಂಬ ನಿರ್ಣಯಕ್ಕೆ ಅಖಿಲ ಭಾರತ ಕಾಂಗ್ರೆಸ್ ಪಾರ್ಲಿಮೆಂಟರಿ ಸಮಿತಿಯಲ್ಲಿ ಬಹುಮತ ದೊರೆಯಬಹುದಂತೆ.

*　　*　　*

ಎಲ್ಲೆಲ್ಲೂ ಈಗ ಮಂತ್ರಿಮಂಡಲದ ರಚನೆಗೆ ಪೂರ್ವಭಾವಿಯಾಗಿ ತಂತ್ರಿ ಮಂಡಲ ಕಾರ್ಯೋನ್ಮುಖವಾಗಿದೆಯಂತೆ.

——o——

# ಉರಿಗಾಳಿ

ಅಂತರ್ರಾಷ್ಟ್ರೀಯ ಚಲನ ಚಿತ್ರೋತ್ಸವಕ್ಕಾಗಿ ಹೊರಗಿನಿಂದ ಬಂದಿರುವ ತಾರೆಯರನ್ನು ಅನೇಕ ಚಿತ್ರಪ್ರೇಮಿಗಳು ಗುರುತಿಸಲಿಲ್ಲವಂತೆ ....ಹೌದು! ಉಡಿಗೆ ತೊಡಿಗೆಗಳೊಂದಿಗೆ ಅವರನ್ನು ಯಾರು ತಾನೆ ಕಂಡಿದ್ದಾರೆ?

* * *

ಸೋತ ಮಂತ್ರಿಗಳೊಬ್ಬರ ಸೋದರಮಾವನ ಮಗನಿಗೆ ಜಾತಕದಲ್ಲಿ ಅಮೇರಿಕಾ ಪ್ರವಾಸ ಯೋಗವಿದೆಯಂತೆ....ಹಾಗಾದರೆ, ಅವರಿಗೆ ಉಪ ಚುನಾವಣೆಯಲ್ಲಿ ಜಯ ಸಿದ್ಧ

* * *

ಇನ್ನು ಮುಂದೆ ಮುಖ್ಯ ಸಚಿವರಿಗೆ ೬ ಜನ ಸೇವಕರೂ ಇತರ ಮಂತ್ರಿಗಳಿಗೆ ೫ ಜನ ಸೇವಕರು ಮಾತ್ರ ಇರುವರಂತೆ ಉಳಿದವರನ್ನೆಲ್ಲ ಯಥಾಪ್ರಕಾರ ಅನುಯಾಯಿಗಳೆಂದೇ ಕರೆಯಲಾಗುವುದು.

* * *

ಆಡಳಿತ ವಹಿಸುವ ಆಸೆ ನಮಗಿಲ್ಲವೆಂದು ಟ್ರಾವಂಕೋರ್ ಕೊಚ್ಚಿನ್ ಸಂಯುಕ್ತ ವಾಮ ಪಂಥದ ನಾಯಕರು ಹೇಳಿರುವರು....ಕಾಂಗ್ರೆಸ್ ಮಂತ್ರಿಗಳನ್ನು ಅಷ್ಟು ಟೀಕಿಸಿದ ನಂತರ, ಅವರ ಸ್ಥಾನದಲ್ಲಿ ಇವರು ಕೂತರೆ ಏನು ಪ್ರಯೋಜನ?

* * *

ಬೆಂಗಳೂರು ಜನಕ್ಕೆ ಸೇವಾ ಬುದ್ಧಿಯೇ ಇಲ್ಲ, ನಾನು ರಸ್ತೆ ಉದ್ದಕ್ಕೂ, ರೆಯಿಲ್ ಸ್ಟೇಷನ್ ದಾರಿ ವಿಚಾರಿಸಿದೆ....ಒಬ್ಬರೂ ಉತ್ತರ ಕೊಡಲಿ ವೆಂದೊಬ್ಬರು ಬರೆದಿದ್ದಾರೆ....ಕನ್ನಡದಲ್ಲಿ ಕೇಳಿದರೆ, ಬೆಂಗಳೂರಲ್ಲಿ ಯಾರಿಗರ್ಥವಾಗಬೇಕು?

* * *

ಸಿನಿಮಾ ನಟಿಯರ ಒಂದು ಕ್ರಿಕೆಟ್ ಟೀಮನ್ನು ಕರೆಯಿಸಿದರೆ, ನಾವು ಪ್ರತಿ ಒಬ್ಬರೂ ಮನೆಗಳಿಂದ ದುಡ್ಡು ತರಿಸಿ, ಹತ್ತು ರೂಪಾಯಿ ಟಿಕೆಟ್ ಕೊಂಡುಕೊಳ್ಳುವುದಾಗಿ, ವಿದ್ಯಾರ್ಥಿ ವೃಂದ ಭರವಸೆ ಇತ್ತಿದೆಯಂತೆ.

* * *

"ಸರ್ವಾನುಮತದಿಂದ ನಾಯಕರ ಚುನಾವಣೆ ಯಾಗಬೇಕಾದರೆ, ಎಲ್ಲರೂ ದೇಶದ ಪರಿಸ್ಥಿತಿಯನ್ನರಿತವರಾಗಿರಬೇಕು" (ಭಾಷಣ) ಅಥವ, ಒಬ್ಬರಿಗೂ ಅದರ ಅರಿವೇ ಇರಬಾರದು.

* * *

ಒಂದು ವಸ್ತುವನ್ನು ದಾನ ಮಾಡಿದರೆ, ದೇವರು ನಮಗೆ ಎರಡನ್ನು ದಯಪಾಲಿಸುತ್ತಾನೆ....ಹೌದು! ಕನ್ಯಾದಾನ ಮಾಡಿದರೆ, ಅಳಿಯ ಮನೆಯಲ್ಲೇ ಠಿಕಾಣಿ.

* * *

ಶ್ರೀಮಂತನಾದ ಅಥವ ತುಂಬ ಬುದ್ಧಿವಂತನಾದ ಹುಡುಗನೇ ಸಿಗಬೇಕು ಎಂದು ಒಬ್ಬರು ವರಾನ್ವೇಷಣ ಮಾಡುತ್ತಿರುವರಂತೆ.. ಆದರೆ, ಬುದ್ಧಿವಂತನಾದವನು ಮದುವೆಗೆ ಒಪ್ಪುವುದಿಲ್ಲವಲ್ಲಾ.

* * *

ನಾನು ನಿಮ್ಮಂತೆ; ನಾನು ಮಂತ್ರಿಯಾದ ಮೇಲೆ ನನ್ನ ಸ್ವಭಾವ ಕೊಂಚವೂ ಬದಲಾಗುವುದಿಲ್ಲ. ಎಂದು ಹೇಳುತ್ತಿರುವ ನಾಯಕರೊಬ್ಬರಿಗೆ ಮಂತ್ರಿ ಪದವಿ ದೊರೆಯುವ ಸಂಭವವೇ ಇಲ್ಲವಂತೆ.

* * *

ಮೂವತ್ತು ವರ್ಷಗಳಿಂದಲೂ ಗ್ರಂಥಗಳನ್ನು ಬರೆಯುತ್ತ ಇರುವ ಒಬ್ಬರನ್ನು ಮೊನ್ನೆ ನಮ್ಮೂರಲ್ಲಿ ಪತ್ತೆ ಹಚ್ಚಿದಾರೆ....ಪಾಪ, ಸಾಹಿತಿಯಾಗಬೇಕೆಂಬ ಆಸೆ ಅವರಿಗಿನ್ನೂ ಇದೆ ಎಂದು ಗೊತ್ತಾಗಿದೆ.

* * *

ಅಶ್ಲೀಲ ಪ್ರಕರಣಗಳನ್ನು ಕತೆ ಕಾದಂಬರಿಗಳಲ್ಲಿ ಸೇರಿಸಕೂಡದೆಂದು ಠರಾವು ಮಾಡಲಾಯಿತು ...ಅವನ್ನು ಆಗಲೇ ಬೆರಿಸಿ ಮಾರುತ್ತಿರುವ ಸಿನಿಮ ತಯಾರಕರ ಪ್ರೇರಣೆಯಿಂದಿರಬೇಕು.

* * *

ಸಣ್ಣದಾಗಿ ಸೊಗಸಾಗಿ ನೂತ ಖಾದಿ ನೂಲಿಗೆ ಬಹುಮಾನ ಪಡೆದ ಗಾಂಧೀ ಭಕ್ತರೊಬ್ಬರು ಅದನ್ನು ಪೌಂಡಿಗೆ ೧೨೦ ರೂಪಾಯಿ ಕೊಟ್ಟರೂ ಮಾರಲು ನಿರಾಕರಿಸಿದರಂತೆ....ಅದಕ್ಕಿಂತ ಹೆಚ್ಚು ಬೆಲೆಗೆ ಅವರು ಅದನ್ನು ಕೊಂಡು ತಂದರೋ, ಏನೋ?

* * *

ಅಪ್ಪನನ್ನ 'ಕತ್ತೆ' ಎಂದು ಬೈದು, ಅದನ್ನ ಒಪ್ಪಿಕೊಂಡ ತನ್ನ ಮಗುವನ್ನು, ಅವರ ತಾಯಿ, "ನಿಜ ಹೇಳಿದೆ, ಅದಕ್ಕಾಗಿ ನಿನ್ನನ್ನು ಕ್ಷಮಿಸಿದೇನೆ," ಎಂದು ಮೆಚ್ಚಿದಳಂತೆ.

* * *

ರಷ್ಯಾ ವಿರುದ್ಧ ಯುದ್ಧ ಸಿದ್ಧತೆಗಳಾಗುತ್ತಿರುವುದನ್ನು ನೋಡಿ, ಹಿಟ್ಲರನು ತಾನು ಏಕೆ ಸತ್ತನೋ ಎಂದು ಮರುಗುತ್ತಿರುವನಂತೆ.



# "ಸಾಹುಕಾರ್ ಕಾಂಪ್ಲೆಕ್ಸ್"

—

ಶನಿವಾರ ಸಾಯಂಕಾಲ ಫಲಪುಷ್ಪಗಳ ಪ್ರದರ್ಶನ. ಹೊಟ್ಟೆ ತುಂಬಿದವರೆಲ್ಲಾ ಸೊಗಸಾದ ಉಡಿಗೆ ತೊಡಿಗೆಗಳನ್ನು ಧರಿಸಿ, ಪೂರ್ಣ ಸಿಂಗಾರಮಾಡಿಕೊಂಡು ಜೋಡಿ ಜೋಡಿಯಾಗಿ ಹೋಗಿ ತಾವು ಪ್ರದರ್ಶನಮಾಡಿಕೊಳ್ಳೋದು ವಾಡಿಕೆ. ಹೊಟ್ಟೆಗಿಲ್ಲದವರೆಲ್ಲಾ ಇವನ್ನೆಲ್ಲಾ ನೋಡಿಯಾದರೂ ಹೊಟ್ಟೆ ತುಂಬಿಕೊಳ್ಳೋಣ ಅಂತ ಅಲ್ಲಿಗೆ ಹೋಗಿ ದೂರದಿಂದ ಎಲ್ಲವನ್ನೂ ನೋಡುವುದೂ ವಾಡಿಕೆ.

ಶನಿವಾರ ಮಧ್ಯಾಹ್ನ ಸಾಹುಕಾರ್ ರಂಗಪ್ಪ ಲಕ್ಷಣವಾಗಿ ಅಲಂಕರಿಸಿಕೊಂಡು, ನಡೆಯುವ ಜವಾಹಿರ ಅಂಗಡಿಯಂತಿದ್ದ ತನ್ನ ಅರ್ಧಾಂಗಿಯನ್ನು ಕರೆದುಕೊಂಡು ದೊಡ್ಡ ಕಾರಿನಲ್ಲಿ ಸಾಹುಕಾರ್ ಶೀನಪ್ಪನ ಮನೆಗೆ ಬಂದ. "ಪ್ರದರ್ಶನಕ್ಕೆ ಹೊರಟಿದ್ದೆವು, ನೀವೂ ಸಿದ್ಧವಾಗಿದ್ದರೆ ಒಟ್ಟಿಗೆ ಹೋಗೋಣ" ಎಂದು ಹೇಳಿದ

ಆಗಲೇ ಶೀನಪ್ಪನಿಗೆ ನೆನಪು ಹಿಂದಿನ ಮೂರು ರಾತ್ರಿಗಳೂ ಅತ್ತಲಿಂದ ಇತ್ತಲಿಂದ ಪೋಲೀಸಿನವರಿಗೆ ಕಾಣಿಸದ ಹಾಗೆ ತನ್ನ ಗಡೌನಿಗೆ ಭತ್ತ ಸಾಗಿಸುವ ಕಾರ್ಯದಲ್ಲಿ ಮಗ್ನನಾಗಿದ್ದರಿಂದ ಶನಿವಾರದ ಸೊಬಗಿನ ಪ್ರದರ್ಶನವನ್ನು ಮರೆತೇ ಇದ್ದ. ಅವನ ಹೆಂಡತಿಗೆ ಇದನ್ನು ಜ್ಞಾಪಿಸಲೂ ವ್ಯವಧಾನವೇ ಸಿಕ್ಕಿತ್ತಿಲ್ಲ. ರಂಗಪ್ಪನ ಸಿದ್ಧತೆ ನೋಡಿ ತಾನೂ ಅಲ್ಲಿಗೆ ಹೋಗಿ ಮೆರೆಯಬೇಕು, ಎಲ್ಲಾ ವರ್ಷಗಳಲ್ಲೂ ಆದಂತೆ ಉಳಿದ ಸಾಹುಕಾರ ಹೆಂಗಸರು ಇವನ ಹೆಂಡಿರ, ಹೊಸ ಒಡವೆಗಳನ್ನು ನೋಡಿ ಹೊಟ್ಟೆ ಉರಿದುಕೊಳ್ಳಬೇಕು, ಎಂಬ ತೀವ್ರ ಹಂಬಲವಿತ್ತು.

ರಂಗಪ್ಪ ಅವನ ಹೆಂಡರಿಗೆ ಬಿಸ್ಕತ್ತು ಟೀ ಕುಡಿಸಿ, ಇನ್ನು ಒಂದು ಗಂಟೆ ಮೇಲೆ ತಾವೂ ಪ್ರದರ್ಶನಕ್ಕೆ ಬರುವುದಾಗಿಯೂ ಅಲ್ಲಿನ ತನಕ ಬೇರೆ ಕೆಲಸವಿದೆಯೆಂದೂ, ಪ್ರದರ್ಶನ ಮುಗಿದಮೇಲೆ ಎಲ್ಲರೂ ಒಟ್ಟಿಗೆ ನಾಟಕಕ್ಕೆ ಹೋಗಿ, ಹಿಂತಿರುಗಬಹುದೆಂದೂ ಹೇಳಿ ಅವರನ್ನು ಕಳಿಸಿಕೊಟ್ಟ.

ಅವರು ಕಾರಿನಲ್ಲಿ ಹೊರಟಕೂಡಲೇ ಸಾಹುಕಾರ ಶೀನಪ್ಪನ ಹೆಂಡತಿ ಗೋಳೋ ಎಂದು ಇನ್ಶೂರೆನ್ಸ್ ಮಾಡದೇ ಇದ್ದ ಗಂಡ ಸತ್ತಹಾಗೆ ಅಳಕ್ಕೆ ಶುರುಮಾಡಿದಳು. "ಎಂದುಕು ಎಂದುಕು" ಎಂದು ಶೀನಪ್ಪ ಗುಟುಕರಿಸುತ್ತಿದ್ದಾಗ. ಆಕೆ ಅಳುವಿನ ಮಧ್ಯೆ ಅಂದಳು "ಹೊಸಾ ನಮೂನೆ ನಾರ್ಗಿಸ್ ನಾಗವಂಕಿ, ನವೀನ ಮಾದರಿ ಸಾಸೀಂ ನಾಗಜಡೆಬಿಲ್ಲೆ—ಅಚ್ಚುಕೆಂಪಿನ, ವಿರೋಧಿ ವರ್ಷದ ಬಳೆ—ಎಲ್ಲಾವನ್ನೂ ಬ್ಯಾಂಕಿನಲ್ಲಿ ಸುರಕ್ಷಿತವಾಗಿ ಇಟ್ಟಿದ್ದೀರಿ! ಕಳ್ಳರ ಭಯ ಅಂತ ನೆಪ ಹೇಳಿ. ಅದನ್ನು ಮಾಡಿಸಿದ ಎರಡು ವರ್ಷಗಳಲ್ಲಿ ಒಂದೇಬಾರಿ ನಾನು ಹಾಕಿಕೊಂಡು ಅವರಿವರ ಹೊಟ್ಟೆ ಉರಿಸಿದ್ದು. ಇವತ್ತಾದರೂ ಅವೆಲ್ಲವನ್ನು ಧರಿಸಿ ತುಂಬಾ ಜನರಿದುರಿಗೆ ನಲಿದಾಟ ಆಡೋಣ ಅಂದರೆ ಇವತ್ತು ಶನಿವಾರ ಮಧ್ಯಾಹ್ನ ಮೂರಾಯಿತು ಬ್ಯಾಂಕು ಮುಚ್ಚಿರುತ್ತೆ. ಮೂರು ದಿನದಿಂದ ನಿಮ್ಮ ಸಹವಾಸವೇ ದೊರಕಲಿಲ್ಲ ಜ್ಞಾಪಿಸಿಕೊಳ್ಳುಕ್ಕೆ. ಈಗ ಹಳೆ ವಜ್ರದ ಬಳೆ ಹಾಕಿಕೊಂಡು, ನಮ್ಮತ್ತೆ ಕಾಲದ ನಾಗಮುರಿ ಹಾಕಿಕೊಂಡು ನಮ್ಮ ಅಜ್ಜಿ ಕಾಲದ ಪಚ್ಚೆ ಬಿಲ್ಲೆ ಹಾಕಿಕೊಂಡು, ಪುಷ್ಪ ಪ್ರದರ್ಶನಕ್ಕೆ ಹೋದರೆ. ಬಂದವರೆಲ್ಲಾ ನನ್ನ ನೋಡಿ, ಪುಷ್ಪ ಕುಂಡ ತಟ್ಟಿ ತಟ್ಟಿ ನಗುತ್ತಾರೆ" ಎಂದು ಬಿಕ್ಕಿ ಬಿಕ್ಕಿ ಅತ್ತಳು.

ಶೀನಪ್ಪನಿಗೆ ಆಗ ಅರ್ಥವಾಯಿತು. ತಾನು ರಂಗಪ್ಪನ ಮುಂದೆ ಈ ದಿನ ಮೆರೆಯಲು ಅಸಾಧ್ಯ. ಅಂದ ಮೇಲೆ ಪ್ರದರ್ಶನಕ್ಕೆ ಹೋಗುವುದೂ ಅಸಾಧ್ಯ, ಎಂಬುವುದು.

ತಲೆ ತಲೆ ಚಚ್ಚಿಕೊಂಡ. "ಅಯ್ಯೋ ದೇವ್ರುಡಾ! ನನಗೆ ಇಂತಹ ಕಷ್ಟ ಕೊಟ್ಟೆಯಲ್ಲಪ್ಪಾ. ನನಗೆ ಇಂತಹ ದುಃಖ ತಂದೆಯಲ್ಲಪ್ಪಾ. ನಿನ್ನ ಹೆಸರಿನಲ್ಲಿ ನಾನು ಗುಡಿ ಕಟ್ಟಿಸಲಿಲ್ಲವೇ, ಅದರ ಜಾತಾ ಬಾಕಿಯಲ್ಲಿ ಅಲ್ಲವೇ ನರ್ಗೀಸ್ ನಾಗವಂಕಿ ಮಾಡಿಸಿದ್ದು. ಅದನ್ನು ಧರಿಸುವ ಸುಯೋಗವನ್ನೂ ಕೊಡಲಿಲ್ಲವಲ್ಲಾ. ಅಯ್ಯಯ್ಯೋ! ಅಂತ ಅಳುವಿನ ಆಲಾಪನೆ ಮಾಡಿದ ಅವನ ಹೆಂಡತಿಯೂ ಹಳೇ ಒಡವೆಗಳನ್ನೇ ಧರಿಸಿ ಅವನ ಜೊತೆಗೂ ಆ ಸಾಯಂಕಾಲವೆಲ್ಲಾ ಅನುಪಲ್ಲವಿ ಅಳುತ್ತಾ ತಲೆ ಕೆದರಿಕೊಂಡಳು.

ಅಯ್ಯೋ! ಪಾಪ! "ಸಾಹುಕಾರರ ಕಾಂಪ್ಲೆಕ್ಸ್"

* * *

ಘಟ್ಟದ ಕೆಳಗೆ ಹೇರಳೆ ಎಂತೊಂದು ಕುಗ್ರಾಮ. ದಿನವೆಲ್ಲಾ ದುಡಿದು, ವಾರವೆಲ್ಲಾ ಅಗೆದು, ತಿಂಗಳೆಲ್ಲಾ ಉತ್ತು, ವರ್ಷವೆಲ್ಲಾ ಕಷ್ಟಪಟ್ಟರೆ, ಎರಡು

ವರ್ಷಗಳಿಗಾಗುವಷ್ಟು ಭತ್ತ ಬೆಳೆಯುತ್ತಿದ್ದ, ಅಲ್ಲಿ ನಮ್ಮ ಗಣಪ್ಪಯ್ಯ. ಆದರೆ ಕಳೆದ ಎರಡು ವರ್ಷಗಳಿಂದ ಕಡೆಗಾಲದಲ್ಲಿ ಜೋರು ಮಳೆಬಿದ್ದು, ವರ್ಷವೆಲ್ಲಾ ಬೆಳೆದ ಭತ್ತ, ಎರಡೇ ರಾತ್ರೀಲಿ, ಪಶ್ಚಿಮ ಕರಾವಳಿಯಾಚಿನ ಪಶ್ಚಿಮ ಸಮುದ್ರಕ್ಕೆ ಕೊಚ್ಚಿಕೊಂಡು ಹೋಗಿಯೇ ಬಿಡುತ್ತಿತ್ತು. ಹೆಂಡಿರು ಮಕ್ಕಳನ್ನು ಕಟ್ಟಿಕೊಂಡು ಒಂದು ಲಟ್ಟಣಿಗೆ, ಒಂದು ಸೌಟು ತೆಗೆದುಕೊಂಡು ಘಟ್ಟದ ಮೇಲಕ್ಕೆ ನಡೆದೇ ಬಂದ. ಒಂದೂರಿನಲ್ಲಿ ಒಂದು ಹೋಟೆಲ್ ಅಂತ ಇಟ್ಟ. ಅನ್ನಪೂರ್ಣೆಯ ದತ್ತುಮಗನಂತೆ ಶೋಭಿಸಲಾರಂಭಿಸಿದ, ಮೂರೇ ವರ್ಷದಲ್ಲಿ ಮೂರು ಅಂತಸ್ತಿನ ಮೂರು ಮನೆ ಕೊಂಡ. ಹೆಂಡತಿ ದೋಸೆ ಇಡಲಿ ಹಿಟ್ಟು ರುಬ್ಬುವುದು, ಮೊದಲನೆ ಮಗಳು ಒಲೆಯಮುಂದೆ. ಮೊದಲ ಮಗ ಸರಬರಾಜು, ತಾನು ಬಾಗಿಲಬಳಿ ತಟ್ಟೆಯಬಳಿ ಗಲ್ಲ ಎತ್ತುವ ಕೆಲಸ. ಹೀಗೆ ಮಾಡಿ ಮೂರು ಲಕ್ಷ ಸಂಪಾದಿಸಿದ ಆಗಲೇ ಮನೆಯವರೆಲ್ಲಾ ಕೂಲಿ ಆಳು ಇಟ್ಟುಕೊಳ್ಳೋಣ ಅಂತ ಸೂಚಿಸಿ ಹಠಹಿಡಿದಿದ್ದು, ಇವನಿಗೆ ಮನಸ್ಸಿನಲ್ಲೇ ದ್ವಂದ್ವ. ಕೂಲಿ ಆಳಿಗೆ ಕಾಸುಕೊಡುವುದಲ್ಲದೇ ಹೊಟ್ಟೆಗೂ ಹಾಕದೇಕು. ಕೆಲಸವಿಲ್ಲದೆ ಮನೆಯವರೆಲ್ಲಾ ಮೆರೆಯಲು ಶುರುಮಾಡಿ ಹಾಗೂ ಖರ್ಚು. ಆದರೂ ಸಾಕಷ್ಟು ದುಡಿದಿದ್ದೇನೆ, ಮಲಗಿ ಉಂಡರೂ ನಮ್ಮ ಜೀವನಕ್ಕೆ ಸಾಕು ಎನ್ನುವ ಕೆಚ್ಚು. ಇಷ್ಟು ದೂರ ಇಷ್ಟರಮಟ್ಟಿಗೆ ತಂದು ನೂಕಿದ ಭಗವಂತ ಈಗ ಏಕೆ ಕೈ ಬಿಟ್ಟಾನು ಎನ್ನುವ ಭ್ರಮೆ. ಮನೆಯವರ ಸಲಹೆಗೆ 'ಹ್ಞೂ' ಎಂದ. ಅವನ ಹೋಟಲಿನಲ್ಲಿ ಇಂದು ಹದಿನಾರು ಜನ ಅಡಿಗೆ ಮನೆಯಲ್ಲಿ, ಸರಪರಾಜಿಗೆ ಮೂವತ್ತೆರಡು ಜನ, ಲೆಕ್ಕಹಾಕಲು ನಾಲ್ವರು, ಗಲ್ಲದ ಹತ್ತಿರ ಮೆನೇಜರು ಎಲ್ಲರೂ ತಮ್ಮ ಹೇರಳೆ, ಹಾಗೂ ಹತ್ತಿರದಿಂದ ಬಂದವರೇ! ನಂಬಿಕಸ್ಥರು, ತನ್ನಹಾಗೆ ಕಷ್ಟ ಪಟ್ಟವರು.

ಆದರೆ ಈ ಹೊಸ ಏರ್ಪಾಟಾದ ಮೂರು ತಿಂಗಳಲ್ಲಿ ಅಮ್ಮಾವರು ಹದಿನಾರು ಪೌಂಡು ತೂಕ ಹೆಚ್ಚಿದರು. ಹಿರೇಮಗಳು ಮಕ್ಕಳೊಂದಿಗತ್ತಿಯ ಕಳೆಪಡೆವಳು ಮಗ ಚಿಗುರು ಮೀಸೆಯ ರೋನಾಲ್ಡ್ ಕೋಲ್‌ಮನ್ ಮಾದರಿ ಬೆಳಸಿ, ರೇಷ್ಮೆ ಜುಬ್ಬ, ಚಿನ್ನದ ಗುಂಡಿ ಧರಿಸಿದ. ಗಣಪ್ಪಯ್ಯ ಮಾತ್ರ, ಮೂವತ್ತೆರಡು ಪೌಂಡು ತೂಕ ಕಡಿಮೆಯಾದ. ಉಟ್ಟ ಪಂಚೆ ಕೂಡ ಸಡಿಲವಾಗಿದ್ದಂತೆ ಕಾಣಬಂತು. ಕಾರಣ ಇಷ್ಟೇ!

ಅಡಿಗೆ ಮನೆಯ ಲ್ಲಿ ಎಲ್ಲಿ ದುಂದಾಗುತಿದ್ದೀ ಅಂತ ಅಲ್ಲಿಗೆ ಓಡುವ. ಪರಿಚಾರಕರು ಎಲ್ಲಿ ಮೋಸಮಾಡುತ್ತಾರೋ ಎಂದು ಅವರ ಹಿಂದೆ ಹಾರುವ. ಮೆನೇಜರು ಏನು ದ್ರೋಹ ಮಾಡುತ್ತಾನೋ ಎಂದು ಅವನ ಹಿಂದೆ ಇಣಕಿ

ನೋಡುವ. ಲೆಕ್ಕದವರು ಏನು ಸುಳ್ಳು ಬರೆಯುತ್ತಾರೋ ಎಂದು ಅವರಮೇಲೆ ಸರ್ಪಕಾವಲು—ಅನುಮಾನಮೂರ್ತಿಮಂತನಾದ.

ಮನೆಗೆ ಬಂದಾಗ ಮಡದಿ ಕುಂಬಿಕೊಂಡು ನಗು ನಗುತಾ ಕೆಂದುಟಿ ತೋರಿದರೆ, ಅನುಮಾನ ಇವಳೇನಾದರೂ ...ಅಂತ. ಪ್ರಾಯಬಂದ ಹಿರೇ ಮಗಳನ್ನು ನೋಡಿದರೆ ಅನುಮಾನ ನನಗೆ ಇವಳಿಂದ ಅಪಮಾನ ಆಗಬಹುದೋ ಎಂದು. ಶಿಸ್ತುಗಾರ ಪುಟ್ಟಸ್ವಾಮಿ ಮಗನನ್ನು ನೋಡಿದರೆ ಅನುಮಾನ, ನನ್ನ ಖಜಾನೇಗೆ ಇವ ದೊಡ್ಡ ತೂತೇ ಹಾಕಿಬಿಟ್ಟಿದ್ದಾನೋ ಎಂದು.

ಅನುಮಾನ ಮಯವಾದ ಅಗ್ರೃಷ್ಟವಂತ ಗಣಪ್ಪೈಯ್ಯ. ಅದರ ಜತೆಯಲ್ಲೇ ಅದೇ ಕಾರಣದಿಂದಲೇ ಅಸಹನೀಯನೂ ಆದ ಸಾಹುಕಾರ ಗಣಪ್ಪೈಯ. ಅಂದ ಮೇಲೆ ವ್ಯಾಪಾರವೂ ಇಳಿಮುಖವಾದದು ಹೆಚ್ಚೇ!

ಅಯ್ಯೋ! ಪಾಪ! "ಸಾಹುಕಾರ ಕಾಂಪ್ಲೆಕ್ಸ್"

* * *

ಬೆಲ್ಲದ ಅಚ್ಚನ್ನು ಹಳ್ಳಿಯಿಂದ ಚೀಲದಲ್ಲಿ ಹೆಗಲಮೇಲೆ ಹೊತ್ತು ಶಹರಿಗೆ ತಂದು ಅದನ್ನು ಮಾರಿ ಜೀವನ ನಡೆಸುತ್ತಿದ್ದ, ನಮ್ಮ ಚೆನ್ನ. ದಿನಕ್ಕೆ ಹದಿನಾರು ಗಂಟೆ ದುಡಿದು ದುಡಿದೂ ಅವನ ವ್ಯಾಪಾರ ಚೆನ್ನಾಗಿ ಕುದಿರಿತು. ಇವತ್ತು ಆತ ಸಕ್ಕರೆ ಮಂಡಿ ಚೆನ್ನಯ್ಯ ಮಂಡಿ ಪೇಟೇಲಿ ಏನೇ ಆಗಲಿ ಅವನದೇ ಮೊದಲ ಹೆಸರು ಅಷ್ಟು ಮರ್ಯಾದೆ ಅವನನ್ನು ಕಂಡರೆ ಜನಕ್ಕೆ.

ಆದರೆ ಸಕ್ಕರೆ ಮಂಡೀಲಿ ಚೆನ್ನಯ್ಯ ಏನು ಮಾಡುತ್ತಾ ಇದ್ದ ಗೊತ್ತೇ? ಗಂಟೆಗೊಂದು ಸರ್ತಿ ಮಂಡೀಲಿ ಕೆಲಸಮಾಡುತ್ತಿದ್ದವರ ಕೈಯನ್ನೆಲ್ಲಾ ಪರೀಕ್ಷೆ ಮಾಡುತ್ತಿದ್ದನಂತೆ ಏನಾದರೂ ಕೈನ ಎಂಜಲು ಮಾಡಿಕೊಂಡಿದ್ದಾರೋ ನೋಡೋಣ ಅಂತ ಈ ಅಭ್ಯಾಸವೇ ಬಲವಾಗಿ ಕಡೆ ಕಡೆಗೆ ಯಾರು ಬಂದು ಎಲ್ಲಿ ಹಸ್ತಲಾಘವ ಕೊಟ್ಟರೂ, ಅವರ ಕೈ ಎಂಜಲಾಗಿದೆಯೋ ಅಂತ ನೋಡುಕ್ಕೆ ಶುರು ಮಾಡಿದ್ದನಂತೆ ಮೊನ್ನೆ ಮೊನ್ನೆ ಮಹಾರಾಜಾಧಿರಾಜರಿಗೆ ಮಂಡಿ ಪೇಟೆಯಲ್ಲಿ ಬಿನ್ನವತ್ತಳೆ ಅರ್ಪಿಸಿದಾಗ ಮಂಡಿ ಚೆನ್ನಯ್ಯ ಆ ರತ್ನಕರಂಡವನ್ನು ಮಹಾಸ್ವಾಮಿಗಳಿಗೆ ಅರ್ಪಿಸಿದಾಗ, ಅವರ ಕೈ ಎಂಜಲಾಗಿದೆಯೇ ಅಂತ ನೋಡಿಯೇ ಬಿಟ್ಟನಂತೆ—

ಅಯ್ಯೋ! ಪಾಪ! ಸಾಹುಕಾರ ಕಾಂಪ್ಲೆಕ್ಸ್.
ಸಕ್ಕರೆ ಮಂಡೀಲಿ ಕೈ ಎಂಜಲಾಗದೇ ಇರುತ್ತೈ?



# ಮದ್ರಾಸ್ ನೊರೆ

---

ಧರಣಿ ಮಂಡಲ ಮಧ್ಯದೊಳಗೆ, ಮೆರೆಯುತಿಹ ಮದ್ರಾಸು ರಾಜ್ಯದ
ಹಿರಿಯ ಕಾಂಗ್ರೆಸೆನುವ ಪಕ್ಷದ, ಪರಿಯ ನಾನೆಂತು ಪೇಳ್ವೇನು!

ರಾಜ್ಯದೊಳಗಡೆ ಇದ್ದ ಮೆಂಬರು, ವ್ಯಾಜ್ಯ ಹೂಡುತ ಜಾತಿ ಜಂಬದಿ
ಅಜ್ಯ, ಒಳ್ಳೆಯ ಭಕ್ಷ್ಯವೆಲ್ಲುತ, ಪೂಜ್ಯರೆನಿಸಿದರಲ್ಲಿಗೆ!

ಹಸಿವೆಯಲಿ ಬೆಂಡಾದ ಜನರಿಗೆ, ಪುಸಿಯ ಭರವಸೆ ಹಸುರು ತೋರಿಸಿ
ಇಸಮು ಇಸಮಿಗೆ ವೈರ ಕಮ್ಯೂ, ನಿಸಮು ಬೆಳೆಯಿತು ಭರ್‍ರನೆ!

ಉದಯ ಕಾಲದೊಳಿದ್ದು ನೆಹರುವು, ಎದೆಯು ಗಟ್ಟಿಯ ಮಾಡಿಕೊಂಡು
ಮುದದಿ ಹೂವನು ಧರಿಸಿ ಬೇಗನೆ, ಚದುರ ಪುಷ್ಪಕ ವೇರಿದ.

ರಂಗ ಬಾ ಕೇಳಪ್ಪ ಬಾರೊ, ಸೀತರಾಮಸ್ವಾಮಿ ನಿಲ್ಲಿಸು,
ಟೀ ಪ್ರಕಾಶ ರೇಗಬೇಡಿರೊ, ಪ್ರೇಮದಲಿ ತಾ ಕರೆದನು.

ಮೇಲೆ ಬಿದ್ದು ಒಮ್ಮೆಲೀಗಲೆ ಬೀಳ ಹೊಯ್ವೆನು ದೇಶವ
ಸೀಳಿ ಪಾರ್ಟಿಯು ನಡೆವೆ ಕೋಪದಿ ಎನುತ ಮನೆಮನೆ ಒಡೆದರು

ಸಿಡಿದು ರೋಷದಿ ಮೆರೆಯುತೆಲ್ಲರು ಘುಡಿಘುಡಿಸಿ ಬೂತೊಳಗೆ ನುಗ್ಗಲು
ತುಡುಕಿ ತುರುಕಿದ ಚೀಟಿ ಎಣಿಸಲು, ಚೂರು ಪಾರೇ ಲಭಿಸಿತು.

ಮುಂದೆ ಬಂದರೆ ಹಾಯಲಾರರು, ಹಿಂದೆ ಬಂದರೆ ಒದೆಯಲಾರರು,
ಏಳಲಾರರು, ಹೇಳಲಾರರು, ಬಿದ್ದೆ ಹೋಯಿತು ಗದ್ದುಗೆ.

ಸೊಕ್ಕದೇರಲು ಮುಂದೆ ಇರ್ಪುದು ಕಿಕ್ಕು ಜ್ಞಾಪಕ ವಿಟ್ಟಿರಿ
ಸಿಕ್ಕಿದೆಲ್ಲವ ಮೇಯ ಬೇಡಿರಿ, ಲಕ್ಕಿದೆಂದಿಗು ಉಳಿಯದು.

ಕಕ್ಷಿ ಇಲ್ಲದ ಇಂಡಿಪೆಂಡರೆ, ಪಕ್ಷವಿಲ್ಲದ ಕಾಂಡಿಡೇಟರೆ,
ಅಕ್ಷಿ ಬೀರುತ ಪಿಟ್ಟಿಯಿಂದಲಿ, ರಕ್ಷಿಸಿರಿ ಈ ಕಾಂಗ್ರೆಸ

—ರಾಮಾಂಜಲು.

# ಹೆಣ್ಣಿನ ಸ್ಥಾನ

---

ಹೆಣ್ಣಿನ ಸ್ಥಾನ ಮನೆಯಲ್ಲಿಯೇ ಸರಿ!

ನಾನು ಹೀಗೆ ಸಿದ್ಧಾಂತ ಮಾಡುತ್ತಿದ್ದಂತೆಯೇ ಪಕ್ಕದ ಕೋಣೆಯಿಂದ ನನ್ನಾಕೆಯ ಧ್ವನಿ ಕೇಳಿ ಕೈ ನಡುಗಿತು, ತುಟಿಯಲ್ಲಿ ಹೊಗೆ ಮಾಡುತ್ತಿದ್ದ ಸಿಗರೇಟೂ ತಣ್ಣಗಾಯಿತು! ತನ್ನ ಗೆಳತಿಯೊಬ್ಬಾಕೆಯೊಡನೆ ನನ್ನಾಕೆ ಹೇಳುತ್ತಿದ್ದಳು; "ನಡಿ ಟೌನ್‌ಹಾಲಿನಲ್ಲಿ ನೆಹ್ರೂ ಭಾಷಣ ಇದೆ; ಹೋಗಾದರೂ ಬರೋಣ. ಇದೇನು ಮನೆ ಒಳಗೇ ಬಂದಿಯಾಗಿರೋದು!" ಆ ಮಹಾ ನಿಶ್ಚಯದ ಧ್ವನಿ ನನ್ನೊಬ್ಬನಿಗೆ ಮಾತ್ರ ಅರ್ಥಪೂರ್ಣವಾಗಿತ್ತು. ಅಂದು ಭಾನುವಾರ; ಯಾವುದೋ ಹಿಂದೀ ಚಿತ್ರಕ್ಕೆ ಮ್ಯಾಟನೀಗೆ ಹೋಗಬೇಕೂಂತ ನನ್ನಾಕೆ ಮೂತಿ ಕೆಂಪಾಗುವಂತೆ ಕೋಪಿಸಿಕೊಂಡಳು : ವಾದ—ವಿವಾದವು, ಹೆಂಗಸು ಮನೇಲೆ ಬಿದ್ದಿರಬೇಕು ಎಂಬ ನನ್ನ ಹಠದಲ್ಲಿ ಕೊನೆಯಾಗಿತ್ತು; ಆದರೀಗ ನನ್ನಾಕೆ ತನ್ನ ಹಠಸಾಧನೆಯಲ್ಲೇ ನಿಶ್ಚಿತಮತಿಯಾಗಿದ್ದಳು. ಎಂತಲೇ ಈ ಹರಟೆಯ 'ಹಣೆಯ ಹರಿಹ' ಬರೆಯುತ್ತಿದ್ದಾಗಲೇ ನನಗೂ ಎದೆಯಲ್ಲಿ ಒಮ್ಮೆ ಛಳಿಗಾಳಿ ಬೀಸಿ ಹೋಯ್ತು.

ಆದರೆ ನಾ ಗಂಡಸು! ನಾರಣಪ್ಪನಂಥ ವೀರ ಕವಿಯ ಕುಲದವನು. ಇಟ್ಟ ಲೇಖಣಿಯನ್ನು ತೆಗೆಯುವುದುಂಟೆ! ಎಂತಲೇ ಆರಂಭಿಸಿಯೇ ಬಿಟ್ಟೆ. ಏನ್ಹಾದರೂ, ಇಡಿಯ ಮುಂದಿಡೆ ಸ್ವರ್ಗ!

ನನ್ನ ಈ ಲೇಖನದ (?) ವಾದಕ್ಕೆ ಅಲ್ಲಲ್ಲಿ 'ನನ್ನಾಕೆ'ಯನ್ನೇ ಉದಹರಿಸುತ್ತೇನೆ. ಇದಕ್ಕೆ ಎರಡು ಕಾರಣಗಳಿವೆ. 'ನನ್ನಾಕೆ' ಈಗಿನ ಪ್ರಗತಿಶೀಲ! [ಪ್ರಗತಿಶೀಲ ಲೇಖಕರು ನನ್ನ ಈ ಪದ ಸ್ವಾತಂತ್ರ್ಯಕ್ಕೆ ನನ್ನಮೇಲೆ ಖತಿಗೊಳ್ಳಬಾರದು (!) ] ಸ್ತ್ರೀಯರ ಪ್ರತೀಕ; ತಂತಾಯಿ-ತಂದೆಯರಿಟ್ಟ ಅಕ್ಕರೆಯ ಹೆಸರಿನ ಜೊತೆಗೆ ತನ್ನದೇ ವಿಶೇಷ ಶ್ರಮದಿಂದ ಸಂಪಾದಿಸಿದ B. A. ಎಂಬುದೂ ಸೇರಿದೆ. ಇನ್ನೊಂದು, ಈ ಲೇಖನವನ್ನು ಬರೆದು, ಪ್ರಕಟಿಸಿಯಾದರೂ, ನನ್ನ ಹಠವನ್ನು ಗೆದ್ದೇಬಿಡಬೇಕೆಂಬ ನನ್ನ ಅತೀವ ಆಕಾಂಕ್ಷೆ.

ಅಜ್ಜಿ ಕತೆಯಂತೆ 'ಒಂದಾನೊಂದು ಕಾಲದಲ್ಲಿ, ಒಂದಾನೊಂದು ದೇಶದಲಿ, ಒಬ್ಬಾನೊಬ್ಬ ರಾಜನು ರಾಜ್ಯವಾಳುತ್ತಿದ್ದಾಗ' ಸ್ತ್ರೀಯ ಸರ್ವ ಸಾಮ್ರಾಜ್ಯವೂ ತನ್ನ ಮನೆಯ ಹೊರಬಾಗಿಲ ಹೊಸಿಲಿನ ಒಳಗೇ ಮುಗಿದು ಹೋಗುತ್ತಿತ್ತು. ಸ್ವಲ್ಪ ಹೆಚ್ಚೆಂದರೆ, ಹೊಸಿಲಿನಾಚೆ ನೀರು ಚುಮುಕಿಸಿ, ರಂಗೋಲಿ ಇಡುವಷ್ಟು ಸ್ಥಳ. ಈ ರಾಜ್ಯದಲ್ಲಿ ಆಕೆಯದೇ ಸರ್ವಾಧಿಕಾರ. ಯಜಮಾನನು ಮನೆಯೊಳಕ್ಕೆ ಹೆಜ್ಜೆ ಇಟ್ಟಮೇಲೆ—ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ, ಅಂತೂ ಇಂತೂ—ತನ್ನ ಯಜಮಾನತಿಯ ಇಚ್ಛೆಯಂತೆಯೇ ನಡೆಯಬೇಕು. ಈಗಿನ ಮುಂದುವರಿದ ಮಹಿಳೆಯರು "ತಾನು ಗಂಡನಿಗೆ ಏನು ಕಡಮೆ?" ಎಂಬ ಧೋರಣೆಯಾಗಲಿ, "ಗಂಡಸು ಮಾಡಿದಂತೆಯೇ ತಾನೂ ಮಾಡಿದರೇ ತಾನು ಅವನಿಗೆ ಸರಿಸಮನೆಂಬ" ಮೂಢ ನಂಬಿಕೆಯಾಗಲೀ, ಹಿಂದಿನ ಕಾಲದ (ನನ್ನ ಅಜ್ಜಿಯ ಕತೆಯ ಕಾಲದ) ಸ್ತ್ರೀಗೆ ಇರಲಿಲ್ಲ.

ಹೆಂಗಸಾದಾಕೆ ತನ್ನ ಎಲ್ಲೆಯಲ್ಲಿದ್ದರೆ, ಆಕೆಗೂ ಕ್ಷೇಮ, ಉಳಿದವರಿಗೂ ಕ್ಷೇಮ. ಹೆಣ್ಣು ಹೊಸಲು ದಾಟಿದರೆ, ಅನಾಹುತ ಪರಂಪರೆಯೇ ಆಗುತ್ತದೆ. ನಮ್ಮ ಪುರಾಣವನ್ನೇ ನೋಡಿದರೆ ಸಾಲದೆ?

ಶ್ರೀರಾಮ ಮುದ್ದಿನ, ಚಿಕ್ಕ ಹೆಂಡತಿ ಸೀತೆಗೆ ಇನ್ನಿಲ್ಲದಂತೆ ಹೇಳಿದ "ಕಾಡುಪ್ರದೇಶ, ಹುಲಿ ಚಿರತೆಗಳ ಕಾಟ" ಎಂದು ಹೆದರಿಕೆ ಹಾಕಿದ. "ನೀನಿದೀಯಲ್ಲ!" ಎಂದು ರಾಗ ಎಳೆದಳು. (ಇದೊಂದು ವಿಶಿಷ್ಟ ರಾಗ ವೈಖರಿ. ಎಂಥ ಸಂಗೀತ ಕಲಾವಿದರೂ ಈ ರಾಗ ಹಾಡಲು ಸಾಧ್ಯವಾಗದೇ ತಮ್ಮ ಶ್ರೀಮತಿಯರಿಗೆ ಶರಣು ಹೊಕ್ಕಿದಾರಂತೆ!) "ನಿನಗೆ ಅರಮನೆಯ ಮೃಷ್ಟಾನ್ನ ಭೋಜನ ಒಗ್ಗಿಹೋಗಿದೆ. ಕಾಡಿನ ಗೆಡ್ಡೆ, ಗೆಣಸು ತಿನ್ನಲಾರೆ" ಎಂದು ಶ್ರೀರಾಮ. "ನೀವಮಾತ್ರ ತಿನ್ನುವುದಿಲ್ಲವೋ?" ಎಂದು ಮರುತ್ತರವಿತ್ತಳು ಸೀತೆ. ಈ ಹಠಮಾರಿ ಹೆಣ್ಣಿನೊಡನೆ ವಾದಮಾಡಲು ಬೇಸತ್ತು, ಆಕೆಯನ್ನು ತನ್ನ ಜೊತೆಗೇ ಕರೆದುಕೊಂಡುಹೋದ ಶ್ರೀರಾಮ: ಫಲ? ದಕ್ಷಿಣ ಭಾರತದ ಒಂದು ಮಾನವ ಕುಲವೇ ನಾಶವಾಗಿಹೋಯಿತು! ಇನ್ನು ದ್ರೌಪತಿ—ಆಕೆಯ ಹೆಸರು ಕೇಳಿದರೇ ಎಂಥ 'ಎಂಟೆದೆ'ಯ ಗಂಡಿಗೂ ಒಮ್ಮೆಯಾದರೂ ಕಂಪನ ಬರದಿರಲಾರದೆ!

"ಹೋಗಲಿ, ಇದೆಲ್ಲ ನಮ್ಮ ಕತೆಗಳು. ಗಂಡು ಹೆಣ್ಣಿನಮೇಲೆ ಮಾಡಿದ ಅಪಪ್ರಚಾರ" ಎಂದಾಳು ನನಸ್ನಾಕೆ. ಆದರೆ, ಬೇರೆ ದೇಶಗಳಲ್ಲೂ ಇಂಥವೇ ಪ್ರಸಂಗಗಳಾಗಿ ಹೋದುವಲ್ಲ. ಗ್ರೀಕ್ ಪುರಾಣದಲ್ಲಿ 'ಹೆಲೆನ್' ಎಂಬ ಚೆಲುವೆಯಲ್ಲಿ 'ಪ್ಯಾರಿಸ್' ಎಂಬ ಯುವಕ ಅನುರಕ್ತನಾಗಿದ್ದು

ಸರಿ, ಉಭಯ ಪಕ್ಷದವರಿಗೂ ಘೋರ ಕದನವೆದ್ದು, ಹತ್ತು ವರ್ಷಗಳವರೆಗೂ ನಡೆದು, ಕೊನೆಗೆ ರೂಪಾಯಿಯಲ್ಲಿ ಎರಡಾಣೆ ಸಹ ಉಳಿಯಲಿಲ್ಲ!

"ಒಲಿದರೆ ನಾರಿ, ಮುನಿದರೆ ಮಾರಿ!"—ನಿಜ, ವೇದ ಸುಳ್ಳಾದರೂ ಗಾದೆ ಸುಳ್ಳಾದೀತೆ? ಇದಕ್ಕೆ ಸಾಧಾರಣ ಪ್ರಮಾಣ ನನ್ನಾಕೆಯೇ ಸಾಕು. ಅಂದು ನೆಹ್ರೂ ಭಾಷಣ ಅಂತ ಹೇಳಿ ಹೋದವಳು, ಹಾಗಿಂದ ಹಾಗೆಯೇ ಅವಳ ತಂದೆಯ ಮನೆಗೆ ಹೊರಟುಹೋಗಿ ಆಳಿನ ಕೈಯಲ್ಲಿ ತಾನು ಒಂದು ವಾರ ಬರಲು ಸಾಧ್ಯವೇ ಇಲ್ಲವೆಂದು ಚೀಟಿ ಬರೆದು ಕಳಿಸಿಬಿಡುವುದೆ! "ಏನೇ ಚೀಟಿ ಬರೆದು ಕಳಿಸಿಬಿಡುವುದೆ?" ಎಂದು ನಾನು ಕೇಳಿದ್ದಕ್ಕೆ ನುಂಗಿಬಿಡುವವಳಂತೆ ನನ್ನನ್ನೇ ದುರುದುರು ನೋಡುತ್ತಾ "ನಾನೇನು ಹಳ್ಳೀ ಹುಡುಗೀಂತ ತಿಳಿದುಕೊಂಡರೇನೋ! ನಾನೂ ಸ್ವಲ್ಪ ಕಾಲೇಜು ಮೆಟ್ಟಲು ತುಳಿದಿದ್ದೀನಿ. ನಾವೂ ಕಾಲೇಜಿಗೆ ರಜಾ ಬೇಕಾದಾಗೆಲ್ಲ ಚೀಟೀನೆ ಕಳಿಸ್ತಾ ಇದ್ದುದು!" ಎಂದು ಬಿಟ್ಟಳು.

ಹೀಗೇಂದ ಮಾತ್ರಕ್ಕೇ ನನ್ನಾಕೆ ಕೆಟ್ಟವಳೆಂದಲ್ಲ; ಅಥವಾ ವರ್ಷದ ಮುನ್ನೂರೈವತ್ತು ದಿನವೂ ಇದೇ ಮೂಡೇ ಇರುತ್ತದೆ ಎಂದು ಅಲ್ಲ. ಅದೊಂದು ಹವಾ-ವಾಯುಗುಣವನ್ನನುಸರಿಸಿ ಪ್ರಕೃತಿಯು ಬದಲಾಯಿಸುವ ಯಾವುದೋ ಒಂದು ತತ್ವವನ್ನಾಧರಿಸಿದೆ. ನನ್ನಾಕೆಯಂತೆ ಅಡಿಗೆಯನ್ನು ಯಾರು ಮಾಡಬಲ್ಲರು? ಅದರಲ್ಲೂ ಚೌಚೌ ತರಕಾರೀ ಅಡಿಗೆ ಮಾಡಿದಾಗ, ಅದರೂ ನನ್ನ ವಾದ ನಾ ಬಿಟ್ಟೇನೆ? ಅಡಿಗೆಯ ಕೈವಾಡದಲ್ಲೂ ಹೆಂಗಸು ತನ್ನ ಹೆಸರನ್ನು ಅಮರವಾಗಿಸಿಲ್ಲ. ಮಾತೆತ್ತಿದರೆ ನಾವೆನ್ನುವುದು 'ನಳಪಾಕ' 'ಭೀಮಪಾಕ' ಎಂದೇ ತಾನೆ" ಹೀಗೊಮ್ಮೆ ನನ್ನಾಕೆಯ ಅಡಿಗೆಯಿಂದ ಅತ್ಯಾನಂದಗೊಂಡ ರಭಸದಲ್ಲಿ ನನ್ನನ್ನು ನಾನೇ ಒಂದು ಮರೆತು, ತುಂಬು ಮೆಚ್ಚಿಕೆಯಿಂದ "ಭೇಷ್! ಅಡಿಗೇಂದರೆ ಇದೂ ಕಣೆ! ಎಂಥ ಭೀಮ ಪಾಕದಂಥ ರುಚಿ!" ಎಂದು ಬಿಟ್ಟೆ. ನನ್ನ ಪುಣ್ಯ! ಅಂದಿನ ಆಕೆಯ ಹಾವ ಹವಾಮಾನ ಸಮಶೀತೋಷ್ಣವಾಗಿದ್ದುದರಿಂದಲೋ ಏನೋ ಆ ಅಡಿಗೆ ಸಂಕೇತ ಆಕೆಯ ಕೈಗೆ ಬರಲಿಲ್ಲ!

ಅಗೋ! ನನ್ನಾಕೆಯ ಧ್ವನಿ!

ಸಂಪಾದಕ ಮಹಾಶಯ, ದಯವಿಟ್ಟು ನನ್ನ ನಿಜ ನಾಮಧೇಯವನ್ನು ಮಾತ್ರ ನಿಮ್ಮ ಪತ್ರಿಕೆಯಲ್ಲಿ ಪ್ರಕಟಿಸಬೇಡ.

ನನ್ನೀ ಎಚ್ಚರಿಕೆಯನ್ನು ನೀವು ಮರೆತರೆ, ನಿಮ್ಮ ಇದೇ ಸಂಚಿಕೆಯೇ ನನ್ನ ಮನೆಯೊಳಗೆ ಬರುವ ಕೊನೆಯ ಸಂಚಿಕೆಯಾಯಿತು! ನನ್ನೀ ಹರಟೆಯ ಲೇಖನವೇ ಕೊನೆಯ ಲೇಖನವಾದೀತು!

—"ಸಾಹಿತ್ಯ ಭಿಕ್ಷು"

# ನನಗಂತೂ ಸರಿಹೋಗದು, ನಿಮಗೆ?

ನಾಳಿನ ಅಡಿಗೆಗೆ ತರ್ಕಾರಿ
ಇಲ್ಲ ರಾಯರೇ ಏನೊಂದೂ
ಸಂಜೆಯ ಮಾರ್ಕೆಟ್ಟಿಗೆ ಹೋಗಿ
ತನ್ನಿರಿ, ಆಂ?"—ಎಂದಾನೆನಲು,

ಗೊತ್ತೇ, ಏನೆಂಬರು ಅವರು?
(ಥೂ! ಹೇಳಲು ನಾಚಿಕೆಯಮ್ಮಾ!
ಗುಟ್ಟಲಿ ಪೇಳುವೆನು,
ಬೇರಾರಿಗು ಹೇಳದಿರಿ!)

ಇಂತೆಂಬರು ಅವರು:
"ನಿನ್ನಯ ಮುಖವೇ ಮೂಲಂಗಿ
ಹುಬ್ಬೇ ಕರಿ ಮೆಣಸಿನಕಾಯಿ
ಕೈ ಕಾಲ್ಗಳೆ ಬಾಳೆಯ ದಿಂಡು
ಬೆರಳುಗಳವೆ ಬೆಂಡೆಯಕಾಯಿ

ಇಷ್ಟಲ್ಲದೆ ಆ ಹಣ್ಣುಗಳು!—
ಹಲ್ ದಾಳಿಂಬೆ, ದ್ರಾಕ್ಷಿ ಕಂಗಳು,
ಕೆನ್ನೆ ಸೇಬು, ತುಟಿ ಮಾವಿನ ಹೋಳು
ಅಲ್ಲದೆ ಕಿತ್ತಳೆ ಗಜನಿಂಬೆ!

ಇವೆಲ್ಲ ನಿನ್ನಯ ಮಾರ್ಕೆಟ್ಟನೊಳೇ
ಇರಲು ಬೇರಾವುದು ಸಿಗದಲ್ಲಿ!"

ಛೇ! ಹೀಗನ್ನುವುದೇ ಗಂಡಸರು?
ನನಗಂತೂ ಸರಿಹೋಗದು, ನಿಮಗೆ?

—ಸುಬ್ಬಯ್ಯ.



## ಮೈಸೂರಿನಿಂದ ಬಂದ ಒಂದು ಪತ್ರಕ್ಕೆ
## ಸಂಪಾದಕರ ಉತ್ತರ

ಮೈಸೂರಿನಿಂದ ಓದುಗರೊಬ್ಬರು ಕಾಗದ ಬರೆದು, ಶ್ರೀ 'ಪಾಪಿ' ಅವರನ್ನು ತಾರೀಫ್ ಮಾಡಿದ್ದಾರೆ. ಶ್ರೀ ಪಾಪಿಯವರಿಗೆ ಆ ಪತ್ರ ಕೊಡಲು ಅವರು ಈ ರೀತಿ ಪತ್ರ ಬರೆದಿದ್ದಾರೆ.

ಬರೆಯುವುದೇನೋ ಬರೆದೆ ತೋಚಿದ್ದು ಆದದ್ದನ್ನು—ಆದರೆ ಅದಕ್ಕಿಂತ ಓದುಗರು ಬರೆದ ಪತ್ರವೇ ಚೆನ್ನ! ಅಂತ. ಶ್ರೀ ಪಾಪಿಯವರಿಗೆ ಆ ಪತ್ರದ ಲೇಖಕರ ಪರಿಚಯ ಆಗಬೇಕಂತೆ. ಪತ್ರದಲ್ಲಿ ಅವರ ವಿಳಾಸವಿದ್ದಿಲ್ಲ, ಆದ್ದರಿಂದ ಈ ವಿಷಯ ಪ್ರಕಟಿಸುತ್ತೀರಾ ಎಂದೂ ಕೇಳಿದ್ದಾರೆ, ಪಾಪಿ ಅವರು.

ಪತ್ರ ಲೇಖಕರು ಒಪ್ಪಿ ಬರೆದರೆ ಶ್ರೀ ಪಾಪಿಯವರು ಇನ್ನೂ ಲೇಖನಗಳನ್ನು ಬರೆಯಬಹುದು.

———o———




ನಿಮ್ಮ ಬೂಟ್ಸಿನ ಪಾಲೀಷ್ ಕೊಳೆ ಆಗಬಹುದು—ಆ ಕಾರಣದಿಂದಲಾದರೂ
ನನ್ನ ಪಾದದ ಮೇಲಿಂದ ನಿಮ್ಮ ಪಾದ ಎತ್ತುತ್ತೀರಾ!

# "ಉದಯವಾಯಿತು ನಮ್ಮ ಗೆಲುವ ಕನ್ನಡನಾಡು"

(ಅಙಾಳಕವಾಡು)

ಉದಯವಾಯಿತು ನಮ್ಮ ಗೆಲುವ ಕನ್ನಡನಾಡು,
ಬಿದಿಯು ಪಿಂಗಿದ ನಿಧಿಯು ದುರಭಿಮಾನದಗೂಡು ॥ ಪ ॥

ಭೋಜನ್ಯರಿಪು ಪರಶುಕಾಮರಪ್ಪನ ನಾಡು,
ಆಜನತೆಯನೆ ಸುಗಿವ ದನುಜರುದಿಸಿಹ ನಾಡು,
ಓಜೆಯಿಲ್ಲದೆ ಮೆರೆವ ಸಾಸಿಗರ ನಡುವೀಡು,
ಸಾಜವನು ನೀಗಿರುವ ಶೂರವೃಂದದ ಬೀಡು ॥ ೧ ॥

ಠಕ್ಕಿಗ ಖಗಾಕ್ಷರರು ಬಲಿತು ಮೆರೆಯುವ ನಾಡು,
ಪೆಕ್ಕಣನ ಕಲ್ಪನೆಯ ದುಚ್ಛರಿಯ ಕರುಗೋಡು,
ರುಕ್ಕಮತಗಳ ಸಾರುವವರಿಗಿದು ನೆಲೆವೀಡು,
ರಕ್ಕಸರ ಗಡಣವ್ವೈ ದುಸ್ಸತ್ತಿಗಳ ಕಾಡು ॥ ೨ ॥

ದಾವನೆಯರಾ ಸ್ವರ್ಣೆ ಕುಮುದೆಯರ ತಾಯ್ನಾಡು,
ಹೇವಾತಿತುಂಗೆಯರು ವೈಯ್ಯುಳಿವ ಕಲುನಾಡು,
ಆವಪರಿ ಸ್ಫೂರ್ತಿಸದ ಕಬ್ಬಗಳ ನಡೆಮಾಡು,
ನೋವ ಗುದಿಗೆಯ ಖೀರ ಬೋರದೇವನ ನಾಡು. ॥ ೩ ॥

—ಅಮೃತ ಚನ್ನಶಾಮ.



# ಸೊಬಗು

---

ಈ ಪರಿಯ ಸೊಬಗಾವ ಲೀಡರಲಿ ಕಾಣೆ
ಮೋತೀ ಸುತ ಪ್ರಿಯ ! ನೆಹರೂವಿಗಲ್ಲದೆ ॥ ಪ ॥

ಹರೆಯ ತನದಲಿ ನೋಡೆ ಯುವಕ ಯುವತೀ ರಮಣ
ಹಿರಿಯ ತನದಲಿನೋಡೆ ಶ್ರೀ ಶಾಂತನು ।
ಸಿರಿಯ ತನದಲಿನೋಡೆ ಕಶ್ಮಿರೋದ್ಭವನಯ್ಯ
ಗುರುವ ತನದಲಿನೋಡೆ ಮೂಡಣದ ಕಾಂತಿ ॥

ಲಾವಣ್ಯದಲಿ ನೋಡೆ ಯೂನೊ ಮೋಹಕನಯ್ಯ
ಆವ ಧೈರ್ಯದಿ ನೋಡೆ, ಜಾತ್ಯಂತಕ ।
ಚಾಲಕತ್ವದಿ ನೋಡೆ ಚತುರ ಚೀನಾ ಸಖನು
ಸೇವತ್ವದಲಿ ನೋಡೆ, ಸರಸಹೃದಯ ॥

ಗಗನದಲಿ ಹುಂಕರಿಪ ತೈಲಗರುಡನೆ ತುರಗ
ಜಗತೀಶಿರಾಪಾದ ವಾಕಾಶ ತನಕ ।
ಅಗಣ ಮೂತಿಗ ಜಾವ ಹರಲಾಲಗಲ್ಲದೆ
ಮಿಗಿಲಾದ ಲೀಡರುಗಳಿಗೀ ಭಾಗ್ಯವುಂಟೆ? ॥

---o---

ಒಂದಲ್ಲ ಸಂಸ್ಥೆಗೆ ಬಂದವರಲ್ಲಾ ಬೇನೆ ಹಿಡಿಸೋರೇ!

* * *

ಒಳ್ಳೇದಾಗಲೀ, ಕೆಟ್ಟದ್ದಾಗಲೀ! ಲಾಲ ಬಹದ್ದೂರು ಶಾಸ್ತ್ರಿ ಪೌರೋ ಹಿತ್ಯವೇ!

# ಕಾರಾತಿಥ್ಯ

ಯಥಾಪ್ರಕಾರ ಆ ದಿನವೂ ರಾಯರ ಕಾರು ಬ್ಯಾಂಕ್ ಚೌಕದಲ್ಲಿ ನಿಂತಿತು. ಅವರ ಎಡಗಡೆಯಿಂದ ಗೌಡರು ಬಾಕಿಲು ತೆರೆದು ಕೆಳಕ್ಕೆ ಧಾವಿಸಿದರು. ನಂತರ, ಕಾರನ್ನು ಹಿಡಿದುಕೊಂಡೇ, "ಕ್ಷಮಿಸಿ! ನಿಮ್ಮ ಹತ್ತಿರ ಒಂದು ಮಾತಿದೆ. ಇನ್ನೇನೂ ತಿಳಿದುಕೊಳ್ಳಬೇಡಿ! ನಾಳೆಯಿಂದ ನೀವು ನನ್ನನ್ನು ಹೀಗೆ ಇಲ್ಲಿಯತನಕ ಕಾರಲ್ಲಿ ಕೂರಿಸಿಕೊಂಡು ಬರಬೇಡಿ....ನಿಮ್ಮ ಉಪಕಾರವನ್ನು ನಾನು ಸ್ಮರಿಸುತ್ತಿಲ್ಲ, ಎಂದಲ್ಲ....... ," ಎಂದು ಪ್ರಾರಂಭಿಸಿದರು.

"ಛೆ' ಛೆ! ನನಗೆ ಅದರಿಂದ ತೊಂದರೆ ಏನೂ ಇಲ್ಲ....ನಾನು ಕೋರ್ಟಿಗೆ ಬರುವದಾರಿ ಇದು. ಮೋಟರ್ ಹೋಗುತ್ತೆ....ಮೋಟರ್ ಬರುತ್ತೆ....ಅಂಥ ಹೆಚ್ಚು ಖರ್ಚೇನು ಮಹಾ?"

"ಇಲ್ಲ, ಇಲ್ಲ, ಹಾಗೆನ್ನಬೇಡಿ! ಒಂದನೆಯ ತಾರೀಖು, ಜ್ಞಾಪಕವಿದೆಯೆ? ಅವತ್ತು ಮನೆ ಅಲಾರಂ ಗಡಿಯಾರ ಕೆಟ್ಟುಹೋಯಿತು....ಅಡಿಗೆ ತಡ....ಊಟ ಅವಸರ....ರುಮಾಲು ಬೇರೆ ಹೊಸದಾಗಿ ಸಿದ್ಧವಾಗಬೇಕಾಗಿತ್ತು. ಓಡಿಬರುತ್ತ ಇದ್ದೆ....ನೀವು ಪಾಪ ಕನಿಕರ ಉಕ್ಕಿ, ಕಾರು ನಿಲ್ಲಿಸಿ, ಎಲ್ಲಿಗೆ, ಎಂದು ಕೇಳಿದಿರಿ...."

"ನೀವು ಓಡುತ್ತಿದ್ದುದನ್ನು ನೋಡಿ, ನಾನು ಏನೋ, ಎಂದು ಹೆದರಿಬಿಟ್ಟೆ"

"ಕಾರು ನಿಲ್ಲಿಸಿ, ನೀವು ನನ್ನನ್ನೂ ಕೂರಿಸಿಕೊಂಡು, ಇಲ್ಲಿಗೆ ತಂದುಬಿಟ್ಟಿರಿ, ಅವತ್ತು"

"ಆಯಿತಲ್ಲಾ! ಆ ಮಾತು ಏಕೆ ಈಗ?"

"ಮೊದಲನೆಯ ತಾರೀಖಿನ ಮಾತು ಹೇಳುತ್ತಿಲ್ಲ ನಾನು....ಎರಡನೆಯ ತಾರೀಖು....ಅವತ್ತೂ ನಿಲ್ಲಿಸಿದಿರಿ....ಏಕೆ? ಯೋಚನೆ ಮಾಡಿ........ಅವತ್ತು ನನ್ನನ್ನು ಕಂಡಾಗ, ನಿಲ್ಲಿಸದೆ ಹೋದರೆ, ನಾನು ಏನು ತಿಳಿದು ಕೊಳ್ಳುತ್ತೇನೋ ಎಂಬ ಅನುಮಾನ ನಿಮ್ಮನ್ನು ಬಾಧಿಸಿರಬೇಕು, ಅಲ್ಲವೆ?"

"ಅಲ್ರಿ! ಈ ಪುರಾಣವೆಲ್ಲ ಯಾಕ್ರಿ ಈಗ?"

"೩ನೆಯ ತಾ॥? ೪ನೆಯ ತಾ॥ ನಿಮ್ಮ ಮನೆಯಿಂದ ನೀವು ಹೊರಟಾಗ, ನೀವು ಮನಸ್ಸಿನಲ್ಲಿ ಅಂದು ಕೊಂಡಿರಬೇಕು....ಇವತ್ತು ಆತನನ್ನ ಅದೇ ದಾರಿಯಲ್ಲಿ ಕಂಡರೆ, ನೆಟ್ಟಗೆ ಹಾರನ್ ಮಾಡುತ್ತ ಹೊರಟೇ ಬಿಡುತ್ತೇನೆ....ಎಲ್ಲಿಂದ ಗಂಟು ಬಿದ್ದ, ಹಾಳು ಮನುಷ್ಯ?....ಎಂದು ಹೇಳಿ ಕೊಂಡಿರಬೇಕು"

"ಬ್ಯಾಂಕಿಗೆ ಹೊತ್ತಾಯಿತು. ಹೊರಡಿರಿ"

"ಅಂದರೆ, ೩, ೪ ತಾರೀಖುಗಳಲ್ಲೂ ನನ್ನನ್ನು ಸಾಗಿಸಿದಿರಿ....೫, ೬ಕ್ಕೂ ನಿಮ್ಮಿಂದ ನಿಮ್ಮ ಮನಸ್ಸನ್ನು ಕಲ್ಲು ಮಾಡಲು ಸಾಧ್ಯವಾಗಲಿಲ್ಲ....ಮನಸ್ಸಾಕ್ಷಿ ಒಳಗಡೆ ಚುಚ್ಚುತ್ತಿತ್ತು, ಅಲ್ಲವೆ? ಇಷ್ಟು ದಿವಸ ಕೂರಿಸಿಬಿಟ್ಟು ಇವತ್ತು ಕಾಣದ ಹಾಗೆ ಹೋಗುವುದು ಹೇಗೆ?....ಎಂಬ ಬಾಧೆ ನಿಮಗೆ. ಆದರೆ, ನಾಳೆಯಿಂದ ದಯವಿಟ್ಟು ನನಗಾಗಿ ನಿಲ್ಲಿಸಬೇಡಿ"

"ಆಗಲಿ, ಗೌಡರೆ! ಇಷ್ಟು ಕಡ್ಡಾಯವಾಗಿ ನೀವು ಹೇಳಿದ ಮೇಲೆ .."

"ಕಡ್ಡಾಯವೇ? ಖಡಾ ಖಂಡಿತ ಅನ್ನಿ! ನಾಳೆ ನೀವು ನನಗಾಗಿ ಕಾರು ನಿಲ್ಲಿಸಿದರೆ, ನಾಳದ್ದು ನಾನು ಬೇರೆ ದಾರಿ ಹಿಡಿಯುತ್ತೇನೆ....ರಜ ತೆಗೆದು ಕೊಳ್ಳುತ್ತೇನೆ........ವೇಷ ಮರೆಯಿಸುತ್ತೇನೆ....ನಿಮಗೆ ಇಷ್ಟವಿಲ್ಲದೆ ಹೋದರೆ, ನಾನು...."

"ಇಷ್ಟವಿಲ್ಲವೆಂದು ನಾನು ಹೇಳಿದನೆ?"

"ಹಾಗಾದರೆ, ನಾಳೆ ನಿಲ್ಲಿಸಿ ಕೂರಿಸುತ್ತೀರೇನು?"

"ನೀವು ಬೇಡ ಅಂದರೆ ಬೇಡ, ಬೇಕು ಅಂದರೆ, ಆಗಲಿ"

"ಅದಕ್ಕಲ್ಲ ...ನಾಳೆಯಿಂದ ನೀವು ನನ್ನನ್ನ ಕರೆದು ತರುವುದಾದರೆ, ಪೆಟ್ರೋಲಿಗಾಗಿ ಒಂದಿಷ್ಟು ರೂಪಾಯಿ ಕೊಡುವ ಮಾತನ್ನ ನಾನು ಎತ್ತ ಬೇಕಾಗುತ್ತದೆ....ಅದೆಲ್ಲ ಚೆನ್ನಾಗಿರುವುದಿಲ್ಲ"

"ಚೆನ್ನಾಗಿಲ್ಲದೆ ಏನು? ಎತ್ತಿ, ಎತ್ತಿ! ಅಂದ ಹಾಗೆ ನಾನೇ ಆ ಮಾತು ನಿಮ್ಮೊಂದಿಗೆ ಆಡೋಣವೆಂತಲೇ ಇದ್ದೆ....ತಿಂಗಳು ಪೂರ್ತಿಯಾಗುತ್ತಲೂ ಲೆಕ್ಕ ಹಾಕಿ ಹೇಳೋಣವೆಂತಿದ್ದೆ....ಪೆಟ್ರೋಲ್ ಒಂದೇ ಅಲ್ಲ ನೋಡಿ....ಸ್ಪ್ರಿಂಗು, ಟೈರು, ನಟ್ಟು, ಬೋಲ್ಟು, ಎಲ್ಲ ಇವೆ, ಸವೆಯುವ ಪದಾರ್ಥ....ನಿಂತುಕೊಳ್ಳಿ, ಗೌಡರೆ! ಹೊರಟೇಬಿಟ್ಟಿರೇನು? ಬ್ಯಾಂಕಿಗೆ ಇನ್ನೂ ಟೈಂ ಇದೆ....ನಾಳೆ ನಿಲ್ಲಿಸ ಬೇಡವೇನು? ಹಾಗಾದರೆ...."

—ಪಾಟೀ.

# ಕಪಿ ಬುದ್ಧಿ

ತೋಳನಿಗೆ ನಿದ್ದೆ ಬರಲಿಲ್ಲ, ಒಂದು ದಿನ ಜೂನಲ್ಲಿ. ತಲೆಯೊಳಗೆ ಏನೇನೋ ಯೋಚನೆಗಳು ತೂರಿದುವು. ಮಾನವನ ನಡತೆ ನೋಡಿ. ಪಕ್ಕದ ಬೋನಿನೊಳಗಿದ್ದ ಕಪಿಯನ್ನು ಕರೆಯಿತು. ಕಪಿಯೂ ಕಣ್ಣು ಬಿಟ್ಟುಕೊಂಡೇ ಇತ್ತು. "ಮಂಗಣ್ಣಾ! ಈ ಮನುಷ್ಯರು...." ಎಂದು ಮಾತು ತೆಗೆಯಿತು. "ಗೊತ್ತಾಯಿತು! ನಿನಗಿಂತ ಬುದ್ಧಿವಂತರಾಗಿದಾರೆ ಅಂತ ತಾನೆ?" ಎಂದಿತು ಕಪಿ. "ಆದರೆ, ನನ್ನ ನಂಟರು ನನಗಿಂತ ದಡ್ಡರು ಅನ್ನೋದು ನನಗೆ ಈಗ ಹೊಳೆಯಿತು." ಎಂಬ ಮಾತನ್ನೂ ಕಪಿ ಸೇರಿಸಿತು. ತೋಳನಿಗೆ ಈ ಮಾತು ಸಹಿಸಲಿಲ್ಲ. "ಸುಮ್ಮನೆ ಜಂಬ ಕೊಚ್ಚಿಕೊಳ್ಳಬೇಡ." ಎಂದು ತೋಳ ಕಪಿಯ ಮುಖವನ್ನು ಮುರಿಯಿತು. ಆಗ ಕಪಿ ಅದರ ಜಂಬದ ಕಾರಣವನ್ನು ವಿವರಿಸಿತು. "ನೋಡೋ, ತೋಳಪ್ಪ! ತಮ್ಮ ನಂಟರಾದ ಕಪಿಯನ್ನು ನೋಡಲು ನಾಲ್ಕಾಣೆ ಕೊಟ್ಟು ಇಲ್ಲಿಗೆ ಬರ್ತ್ತಾರಲ್ಲಾ ಈ ನರ ಮನುಷ್ಯರು, ಅವರನ್ನ ನೋಡೋ ಪುಣ್ಯ ನನಗೆ ಬಿಟ್ಟಿ ಲಭಿಸುತ್ತದೆ ಅನ್ನೋದು ಅವರಿಗೆ ಹೊಳೆಯಲಿಲ್ಲವಲ್ಲಾ....ನಂಟರನ್ನ ನೋಡೋಕೆ ಕಾಸು ಚೆಲ್ಲೋ ಅವರು ಹೆಚ್ಚು ಬುದ್ಧಿವಂತರೋ, ಚೆಲ್ಲದೆ ಇರೋ ನಾನು ಹೆಚ್ಚು ಬುದ್ಧಿವಂತನೋ, ನೀನೇ ಹೇಳು"

—o—



ಯಾವ ಹೊಟಲದೇ ಈ ತಿಂಡಿ? ತಕ್ಕಮಟ್ಟಿಗಿದೆ!
—ಹಾಗೇಂದ್ರೆ! ಹಾಗಾದರೆ ನಾನೇ ಮಾಡಿದ್ದು! ಈಗ!

# ಉತ್ತೇಜನ

---

ನಾಡಹಬ್ಬದ ಅಧ್ಯಕ್ಷತೆ ವಹಿಸಲು ನಾನು ಒಪ್ಪಿ ಕೊಂಡೆ, ಎಂಬ ಸುದ್ದಿ ಕಿವಿ ಮುಟ್ಟುತ್ತಲೂ, ವೆಂಕಟಶಾಮಿ ಓಡಿಬಂದ, ನನ್ನ ಮನೆಗೆ.

"ಏನಯ್ಯಾ? ಈ ಶನಿ ಎಲ್ಲಿ ವಕ್ರಿಸಿದ, ಎಂದು ನನ್ನನ್ನ ಶಪಿಸಬೇಡ.... ಹೀಗೆಯೇ ಕ್ಲಬ್ಬಿಂದ ಮನೆಗೆ ಹೋಗುತ್ತಾ ಇದ್ದೆ....ನಿನ್ನ ಮನೆ ದೀಪ ಉರಿಯುತ್ತಿತ್ತು. ಅಧ್ಯಕ್ಷ ಭಾಷಣವನ್ನ ಉರು ಹೊಡೀತಾ ಇರಬಹುದು ನೀನು, ಅಂತ, ನುಗ್ಗಿದೆ, ಅಷ್ಟೆ ನಿನಗೆ ಜಯವಾಗಲಿ, ಅಂತ ಶುಭಾಶಯ ಕೋರೋಣ ಅಂತ ಬಂದೆ, ಅಷ್ಟೇ. ನಿಜವಾಗಿಯೂ ನೀನು ಒಂದು ಒಳ್ಳೇ ಭಾಷಣಾನ ಅಲ್ಲಿ ಸೊಗಸಾಗಿ ಹೊಡೆದೆ ಅಂದ್ರೆ, ನೋಡು, ಮುಂದಿನ ಚುನಾವಣೆಗೆ ನಿನ್ನನ್ನ ಯಾವುದಾದರೂ ಒಂದು ಪಾರ್ಟಿಯವರು ನಿಲ್ಲಿಸೇನಿಲ್ಲಿಸುತ್ತಾರೆ....ಅಪೇಕ್ಷಾ ಪತ್ರಾನ ವಾಪಸ್ ಪಡೆಯದೆ "ಕೊನೆಯವರೆಗೂ ಗಟ್ಟಿಯಾಗಿ ನಿಂತರೆ, ಒಳ್ಳೇದೊಂದು ಗುರುತೂ ಗಿಟ್ಟಿಸಿ ಬಿಟ್ಟರೆ, ನಿನಗೇನಯ್ಯಾ, ಮಂತ್ರಿ ಪದವೀನೆ, ಕೊನೆಯ ಪಕ್ಷ; ಇನ್ನಾವುದಾದರೂ ಒಳ್ಳೆಯ ಉಪಜೀವನಮಾರ್ಗ ದೊರೆಯದಿದ್ದರೆ.

ದೀಪ, ಇಷ್ಟು ಹೊತ್ತಿನಲ್ಲಿ ಉರಿಯೋದನ್ನ ನೋಡಿದಾಗಲೇ, ನೀನು, ಮೂರು ಭಾಷಣ ಕೊಟ್ಟಿಯಲ್ಲಾ, ಆ ಊರಲ್ಲಿ, ಅವಕ್ಕಿಂತ ಉತ್ತಮವಾಗಿ ಈ ಸಲ ಮಾತಾಡುವುದಕ್ಕೆ ಕಂಕಣ ತೊಟ್ಟಿರಬಹುದು, ಅಂತ ಊಹಿಸಿದೆ, ನಾನು.

ನೋಡಪ್ಪ, ಆ ಹಿಂದಿನ ಭಾಷಣಗಳು! ಥೂ! ಥೂ! ಥೂ! ಈಗಲೂ ನೆನೆಸಿಕೊಂಡರೆ, ಯಾಕಪ್ಪ ನಿನ್ನ ಬಾಗಿಲಿಗೆ ಬರುತ್ತಾರೆ ಈ ಕಾರ್ಯದರ್ಶಿಗಳು ಅನಿಸುತ್ತದೆ. ಅದಕ್ಕೋಸ್ಕರವೇ ನಾನು ಬಂದೆ, ನಿನ್ನ ಬೆನ್ನು ತಟ್ಟಿ ಹೋಗೋಣ, ಅಂತ.

ನಿನ್ನ ಭಾಷಣ ಏಕೆ ಇಷ್ಟು ಅಸಹ್ಯ, ಅಂತ ನಾನೂನೂ ಆವತ್ತಿನಿಂದ ಯೋಚನೆ ಮಾಡುತ್ತಾ ಇದೀನಿ. ನೀನು ಹೇಳುವುದೇನೋ ಕನ್ನಡವೆ!

ಅರ್ಥವೂ ಇದೆ, ನಿನ್ನ ಪಾತಿಗೆ, ಆಗಾಗ! ಆದರೆ, ನೀನು ಹೇಳುವರೀತಿ, ನಿನ್ನ ಮುಖದ ಚೇಷ್ಟೆ, ನೀನು ಕೈ ಬೀಸುವ ಬಿರುಸು, ನಿನ್ನ ಬೆನ್ನಿನ ಡೊಂಕು, ನಿನ್ನ ಮೂಗು ಮಧ್ಯೆ ಮಧ್ಯೆ ಬಾಯಿ ಹಾಕುವುದು, ಇವೊಂದೂ ನಿನ್ನ ಭಾಷಣಕ್ಕೆ ಕಳೆ ಕೊಡುವಂತಿಲ್ಲ; ಕ್ಷಮಿಸು ಇವನು ಹೀಗೆ ಕನ್ನಡಿ ಹಿಡಿಯುತ್ತಾನಲ್ಲಾ, ಅಂತ ರೇಗ ಬೇಡ. ರೇಗಿದರೆ ನಿನ್ನ ಮುಖ ಇನ್ನೂ ಆಭಾಸ.

ನಿನ್ನ ಗಂಟಲೇನೋ ಗೀಚಲು; ದೇವರು ಮಾಡಿದ ತಪ್ಪು, ಅದು. ಆದರೂ ಅದುಯಾಕೆ ನೀನು, ಹಾಗೆ ಗೋಳೋ ಎಂದು ರೋದನ ಮಾಡುತ್ತೀಯಾ?

ಅಲ್ಲದೆ, ನೀನು ವೇದಿಕೆಯನ್ನು ಹತ್ತುವಾಗ, ಏನೋ ಒಂದು ರೀತಿಯ ಸಂಕಟ ತೋರಿ ಬರುತ್ತದೆ, ಏಕೆ? ಗಲ್ಲಿಗೇರಿಸುವಾಗ ಕೊಲೆ ಪಾತಕನಲ್ಲದ ಅಪರಾಧಿ ಹತ್ತುವ ತರಹ ಏರುತ್ತೀಯಾ. ನಿನ್ನ ಹೆಸರನ್ನ ಕಾರ್ಯದರ್ಶಿ ಸೂಚಿಸುತ್ತಲೂ, ಸ್ವಿಚ್ ಹಾಕಿರುವ ಬಲ್ಬಿನ ಹಾಗಿರಬೇಕು, ನಿನ್ನ ಮೂತಿ. ಇಳಿಯುವಾಗಲೂ ಅಷ್ಟೆ, ಖುಷಿಯಾಗಿರಬೇಕು. ಹಾರಕ್ಕೆ ಕತ್ತು ನೀಡುವಾಗ ದಾಹದಿಂದ ನರಳುವ ಒಂಟೆಯು ಹಾಗೆ ನೀಡುತ್ತೀಯೆ, ಸರಕ್ಕಾಗಿ ಬಾಗುವ ಪಕ್ಷಿರತ್ನ ದಂತಿರಬೇಕು, ಕಣೊ.

ನೋಡಯ್ಯಾ, ಈ ನಾಡಹಬ್ಬದ ಅಧ್ಯಕ್ಷತೆ ನಿನ್ನ ಜೀವಮಾನದಲ್ಲೇ ಅತೀ ಮುಖ್ಯ ಘಟ್ಟ. ನಾವೆಲ್ಲ ಇರ್ತೀವೆ, ಕ್ಲಬ್ಬಿನವರು, ಐದಾರು ಜನ. ಅಲ್ಲಲ್ಲೇ ಕೂತು, ನಿನ್ನ ಭಾಷಣ ಹೇಗಿದ್ದರೂ, ನಾವು ಚಪ್ಪಾಳೆ ತಟ್ಟುತ್ತೀವೆ, ನಿನ್ನ ಭಾಷಣ ಮುಗಿದ ಕೂಡಲೇ.

ಧೈರ್ಯವಾಗಿರು! ನಾನು ಬರುತ್ತೇನೆ ಇನ್ನು....ನಿನ್ನ ಬೆನ್ನು ತಟ್ಟಿಬಿಟ್ಟು ಹೋಗೋಣ ಅಂತ, ಮನೆಗೆ ಹೋಗುತ್ತ, ಇಲ್ಲಿಗೆ ನುಗ್ಗಿದೆ, ಅಷ್ಟೆ" ಎಂದ

ನಾನು ದೀಪ ಆರಿಸಿದೆ; ಮಲಗಿದೆ; ನಿದ್ದೆ ಬರಲಿಲ್ಲ.

— ಕಾಮತ್



# ತಾತನಿಗೆ ಚಿಕಿತ್ಸೆ

ನಮ್ಮ ಮನೆ ತಾತನಿಗೆ ಬಹಳ ದಿನದಿಂದಲೂ ಖಾಯಿಲೆ. ಮನೆ ಡಾಕ್ಟರೇ ಔಷಧಿ ಕೊಡುತ್ತಾ ಇದ್ದರು. ಬೆಳಗ್ಗೆ ಎದ್ದ ತಕ್ಷಣ, ಕೊಂಚ ತೋಟದಲ್ಲಿ ಕೆಲಸಮಾಡು. ಆಹಾರ ಕಮ್ಮಿ ಮಾಡಿಕೊ, ಕುದುರೆ ಜೂಜು ಕುಡಿತ ಎಲ್ಲ ಬಿಟ್ಟುಬಿಡು, ಯಾರ ಹತ್ತಿರವೂ ಜಗಳಕ್ಕೆ ಹೋಗಬೇಡ, ಕೋಪ ಕೂಡದು, ಮನೆಯವರ ಹತ್ತಿರ ಸರಸವಾಗಿರು, ಇದೆಲ್ಲ ಅವರು ಹೇಳಿ, ಕೊಂಚ ಹತೋಟಿಗೆ ತಂದಿದ್ದರು.

ಆದರೆ, ತಾತನಿಗೆ ಸಮಾಧಾನವಿಲ್ಲ. ತನಗೆ ಬಂದಿರುವ ರೋಗ ಮಹಾ ಭಯಂಕರದ್ದು ಅದಕ್ಕೆ ಪರಿಹಾರ ಕಂಡು ಹಿಡಿಯುವುದಕ್ಕೆ ಒಬ್ಬರು ಡಾಕ್ಟರು ಸಾಲದು ಎಂದು ಅವನಿಗೆ ಅನ್ನಿಸಿತು. ಇಬ್ಬರು ಹೋಮಿಯೋಪತಿಗಳು ನಾಲ್ಕು ಆಯುರ್ವೇದ ಪಂಡಿತರು, ಒಬ್ಬ ಮಂತ್ರವಾದಿ, ನಾಲ್ಕು ಜೆಟ್ಟಿಗಳು ಸ್ವತಂತ್ರವಾಗಿ ಯಾವ ವಿದ್ಯಾವ್ಯಾಸಂಗವೂ ಇಲ್ಲದೆ ಮಾರ್ಕೆಟ್ ಚೌಕದಲ್ಲಿ ನಾರು ಬೇರು ಮಾರುತ್ತಿದ್ದ ಇಬ್ಬರು ಅನಾಮಧೇಯರು–ಎಲ್ಲರನ್ನೂ ಒಟ್ಟಿಗೆ ಮನೆಗೆ ಕರೆಯಿಸಿ, ಮನೆ ಡಾಕ್ಟರು ಶುದ್ಧ ಅಯೋಗ್ಯರು, ಎಂದು ಮೊದಲಿಂದಲೂ ದೂರುತ್ತಿದ್ದ ಒಬ್ಬ ಪುಂಡನನ್ನು ಯಜಮಾನನಾಗಿ ಕೂರಿಸಿ, ಲ್ರೋ, ನೀವೆಲ್ಲ ಕೂತು ಚಿಂತಿಸಿ ನನಗೊಂದು ಚಿಕಿತ್ಸಾಕ್ರಮವನ್ನು ನಿರ್ಧರಿಸಿ, ಎಂದ. ನಾವು ಎಷ್ಟೋ ಹೇಳಿದೆವು--ಬೇಡ, ತಾತ! ಪ್ರಾಣಕ್ಕೇನೇ ತಂದು ಬಿಡ್ತಾರೆ; ಸತ್ತರೂ ಹಳೆಯ ವೈದ್ಯರ ಔಷಧಿ ಕುಡಿದೇ ಸಾಯೋದು ಸುಖ, ಅಂತ. ಕೇಳಿದರೆ, ತಾನೆ? ಒಂದು ತಲೆಗಿಂತ ಹತ್ತುತಲೆ ಮೇಲು ಅಂತ ಹಟ ಹಿಡಿದ. ಹಳೆಯ ವೈದ್ಯರನ್ನು ಮೂಲೆಯಲ್ಲಿ ಕೂರಿಸಿ ತಾವೇ ತಾತನ ಹಣ ಸುಲಿಯಬೇಕು, ಅಂತ ಹೊಸಬರ ಗುಂಪು ನಿಶ್ಚಯಮಾಡಿ ಕೊಂಡರು.

ಹೊಸ ವೈದ್ಯರುಗಳೆಲ್ಲ ಸಭೆಸೇರಿದರು. ಎಲ್ಲರಿಗೂ ಸಮ್ಮತವಾದ ಕನಿಷ್ಠ ಪಕ್ಷದ ಕಷಾಯವನ್ನೇ ತಾತನಿಗೆ ಕುಡಿಸಬೇಕೆಂದು ಅವರು ತೀರ್ಮಾನಿಸಿದರು. ಸುಸ್ತಾಗಿರುವ ತಾತನಿಗೆ ಇನ್ನೂ ಸುಸ್ತು ಮಾಡಿಸುವುದೇ ಉತ್ತಮ ಚಿಕಿತ್ಸೆ ಎಂದೊಬ್ಬರು ವಾದಿಸಿದರು. ಪರದೇಶೀ ಗುಳಿಗೆಗಳನ್ನು ವರ್ಜಿಸಿ ಹಿತ್ತಲಗಿಡವನ್ನೇ ಕಿತ್ತು ಬೇಯಿಸಿ ತಿನ್ನಬೇಕೆಂದೊಬ್ಬರು ಹೇಳಿದರು. ಪೊರಕೆ ತೆಗೆದು ಕೊಂಡು ತಾತನ ಬೆನ್ನಿಗೆ ನಾಲ್ಕು ಬಾರಿಸಿ, ಅವನ ಮೈಗೆ ಎಂಟುಕಡೆ ಬರೆ ಎಳೆದರೆ, ತಾತ ಹೊಸ ಮನುಷ್ಯನಾಗಿ ಬಿಡುತ್ತಾನೆ ಎಂದೊಬ್ಬರು ಕೂಗಾಡಿದರು. ಹೆಂಡ ಕುಡಿದರೆ ಸರಿಹೋಗುತ್ತೆ. ಪುರಾಣ ಶ್ರವಣ ಮಾಡಿಸಿದರೆ ಆರೋಗ್ಯ ಭಾಗ್ಯ ಬರುತ್ತೆ ಎಂದರು ಮತ್ತೊಬ್ಬರು, ನಾಡ ಹೆಂಡಕೂಡದು. ರಷ್ಯಾದೇಶದ ವೋಡ್ಕ ಹೆಂಡವೇ ಉತ್ತಮ ಎಂದೊಬ್ಬರು ವಾದಿಸಿದರು.

ತರಹ ನೋಡೀದರೆ, ಅವರೆಲ್ಲರೂ ಒಪ್ಪುವಂತಹ ಚಿಕಿತ್ಸೆ ಒಂದೂ ಇರಲಿಲ್ಲ. ನೀರು ಕುಡಿಸೋಣವೆಂದರೆ, ಮೈತುಂಬ ನೀರು ತುಂಬುತ್ತದೆ. ತರ್ಕಾರಿ ಎಲ್ಲ ಉಷ್ಣ ಪಿತ್ತ ಶೀತ. ಹಾಲು ತಂಪು. ಎದ್ದರೆ ಸುಸ್ತು, ಮಲಗಿದರೆ, ಸೋಮಾರಿ ತನ. ನಡೆದರೆ ವಾಯು, ಕೂತರೆ ಮೂಲ.

ಕಡೆಗೆ, ಎಲ್ಲರೂ ಒಪ್ಪಿದ್ದು, ಒಂದೇ....ಗಂಟೆಗೊಂದು ಬಾರಿ, ಮೂಗಿಂದ ಗಾಳಿ ಸೇವನೆ... ತಾತ ಅದಕ್ಕೂ ಒಪ್ಪಿದ. ಒಪ್ಪದೆ ಗತ್ಯಂತರವಿರಲಿಲ್ಲ. ಹಳೇ ಡಾಕ್ಟರು ಕೈ ಬಿಟ್ಟರು, ಕರೆದರೂ ಬರಲಿಲ್ಲ. ಹೊಸ ಡಾಕ್ಟರುಗಳ ನಡುವೆ ಮಾರಾಮಾರಿ... ಚಿಕಿತ್ಸೆ ಪ್ರಾರಂಭವಾದದಿನವೇ ತಾತನನ್ನ ಮಾರಿ ನುಂಗಿದಳು

—ರೇವಣ್ಣ.



ಇದೇನಯ್ಯಾ..... ಬಂದವರಿಗೆ ಟೋಪಿ ಹಾಕೋದುಬಿಟ್ಟು
ನೀನೇ ಹಾಕಿಕೊಂಡಿದ್ದಿಯಲ್ಲ!

# ಸಾಂಬಶಿವನ ಸಲಹೆ

---

ಕೈಯಲ್ಲಿ ಕಂತೆ ಪುಸ್ತಕ ಹಿಡಿದು ಹೊರಲಾರದೆ ಸಾಂಬಶಿವ ಹೊತ್ತು ನಡೆದಿದ್ದ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಇವನಿಗೆ ಪೆಟ್ಟಿಗೇಲಿಡೋಕೆ ಪುಸ್ತಕ ಇಟ್ಕೊಳ್ಳೊ ಖಯಾಲಿ. ಎಲ್ಲಾ ಎರವು ತಂದದ್ದು. ಎಲ್ಲಿ ಸಭೆ ಸಮ್ಮೇಳನವಾದರೂ ಸಾಂಬಶಿವ ಸಿದ್ಧ—ಅವನೇನೂ ಯಾವ ಪತ್ರಿಕೆ ಉಪಸಂಪಾದಕನಲ್ಲ ಅಥವ ಪ್ರತಿನಿಧಿಯಲ್ಲ—ಆದರೂ ಪ್ರಿಂಟಾಗಿ ಹೊರಬಿದ್ದ ಪುಟಗಳಲ್ಲಿ ಕೈ ಆಡಿಸಿ—ಟೀಕೆಮಾಡಿ—ಹೀಯಾಳಿಸಿ ಎಲ್ಲದರಲ್ಲೂ ತನ್ನ ಮೂಗು ಚಾಚಿ ಹಿಹಿಹಿ ಎಂದು ಒಂದು ನಮೂನೆ ತಾತ್ಸಾರ ಮಿಶ್ರವಾದ ಗೇಲಿ ನಗು ನಗುತ್ತಿದ್ದ. ಆದ್ದರಿಂದ ಪತ್ರಿಕೆಯವರಲ್ಲಿ ಸೇರಿ ಹರಟಿದರೂ ನೀರಮೇಲಿನ ಕಮಲದೆಲೆಯ ಹಾಗೆ ಬರೆಯೋರ ಜೊತೆ ಇದ್ದರೂ ಬರೆಯದವನಾಗಿದ್ದ. ಸದಾ ಏನಾದರೊಂದು ದೊಡ್ಡ ಚರ್ಚೆ ಬಿಸಿಬಿಸಿಯಲ್ಲಿ ಭಾಗವಾಗಿ ಎಲ್ಲರೂ ಮಾತಾಡುವಾಗ ತಾನೂ ತಲೆ ಹಾಕಿ ಹರಟೆಬಿಡುವ. ಅಂಥಾ ಕ್ರಾಂತಿಕಾರಕ ಸಾಹಿತ್ಯ ಸಾಂಬಶಿವ ನಿರ್ಮಿಸದಿದ್ದರೂ ಅವನ ಮುಖದಲ್ಲಿ ಉದ್ದಾಮ ಕವಿಯ ಕಳೆ. ಆ ಭಾರಿ ಕನ್ನಡಕ ಕೆದರಿದ ಕ್ರಾಪು, ಕೊಳಕು ಜುಬ್ಬ, ಡೀಲಾದ ಪೈಜಾಮ ನೋಡಿದರೆ ಸಾಂಬಶಿವ ಸಾಧಾರಣ ವ್ಯಕ್ತಿಯಲ್ಲ ಎಂದೆನಿಸುತ್ತಿತ್ತು.

ಸಾಹಿತಿಗಳ ಸಂಘದಲ್ಲಿ ಮೊನ್ನೆ ಮಾಡಿದ ಕತೆಗಾರರ ಕಾದಂಬರಿಕಾರರ ಸಮ್ಮೇಳನಕ್ಕೆ ಸಾಂಬಶಿವ ಮಾಮೂಲಾಗಿ ನುಗ್ಗಿದ್ದ. ಬಿಸಿ ಬಿಸಿ ಚರ್ಚೆ—ಅಶ್ಲೀಲ ಸಾಹಿತ್ಯ ಕಾಮೋದ್ದೀಪಕ ಸಾಹಿತ್ಯ ಸಂಹಾರಕರ ಕರ್ಕಶಕಂಠ ಶೋಷಣೆ ಕಂಡ ಸಾಂಬಶಿವನ ಸ್ಫೂರ್ತಿ ಎಚ್ಚರಗೊಂಡಿತು, ತಲೆ ಕೆರೆದುಕೊಂಡ. ನಾನಾ ಭಾವನೆಗಳು ಅವನ ಆ ಪೊದರು ತಲೆಯಲ್ಲಿ ಮೂಡಿಬಂದವು. ನಿಜವಾಗಿ ಸಮಾಜವನ್ನು ಒಳ್ಳೆಯ ಮಾರ್ಗಕ್ಕೆ ತರುವ ಗುರುತರವಾದ ಕೆಲಸ ಪುಸ್ತಕ ಬರೆಯೋರ ಹೆಗಲಮೇಲೇರಿದೆ ಎಂದು ಅವನ ತಲೆಯಲ್ಲಿ ಹೊಕ್ಕೊಡನೆ ತನ್ನ ಜವಾಬ್ದಾರಿಯ ಮೇರೆ ಬಹಳ ವಿಶಾಲವಾದದ್ದೆಂದು ನಿರ್ಧರಿಸಿದ. ಹೀಗೆ ನಿರ್ಧರಿಸಿದಮೇಲೇ ಅವನು ಕೈಯಲ್ಲಿ ಕಂತೆ ಪುಸ್ತಕ ಹಿಡಿದು ಹೊರಟಿದ್ದ. ಗ್ರಹಚಾರ ಕಡಿಮೆಯಾಗಿ ಅವನನ್ನು ತಡವಿ ಮಾತಾಡಿಸಿದೆ. ಮಾತಾಡ ಹಾರಿಸದಾಗಿತ್ತು, ಅಡಿಸಿಬಿಟ್ಟೆ.

"ಏನು ಸಾಂಬಶಿವ, ಶಾನೆ ಕಡತ ಹೊತ್ತು ಹೊರಟೆಯಲ್ಲಾ . ....." ಎಂದೆ ಹಾಗೆ ಕೇಳಿದ್ದೇ ತಪ್ಪಾಯಿತು. ಕೈಲಿದ್ದ ಕಂತೆ ನನ್ನ ಕೈಗೇ ಕೊಟ್ಟ. ಜೇಬಿಂದ ಮುರುಕು ಸಿಗರೇಟು ತೆಗೆದು ಇನ್ನೊಂದು ಜೇಬಿನಿಂದ ಬೆಂಕಿಪೊಟ್ಣ ತೆಗೆದು ಕೆರೆದು ಹೊಗೆ ಎಳೆದು ಪ್ರಾರಂಭಿಸಿದ.

"ಕಾಮೋದ್ದೀಪಕ ಸಾಹಿತ್ಯದಿಂದ ಆಗುತ್ತಿರೋ ಹಾನಿ ಗೊತ್ತೆ?....ಇಲ್ಲ ನೀನು ಕಾಣೆ. ಸಾಹಿತಿಯ ಜವಾಬ್ದಾರಿ ಸಮಾಜದಲ್ಲಿ ಸಜ್ಜನರನ್ನು ತಯಾರು ಮಾಡೋದು....ಅಂಥಾ ಸಾಹಿತ್ಯ ಭಟ್ಟಿ ಇಳಿಸಬೇಕಾದ್ದು ನಮ್ಮ ಕೆಲಸ—ಇಲ್ನೋಡು ನಾನೊಂದು ಪಟ್ಟಿ ತಯಾರಿಸಿದ್ದೀನಿ—ಅದರಂತೆ ಎಲ್ಲರೂ ಸಹ ಕರಿಸಿ ನಡೆದುಕೊಂಡರೆ ದೇಶಾದ್ಯಂತ ಸಂಭಾವಿತರ ತಂಡ ತಾಂಡವಾಡುತ್ತಿರುತ್ತೆ ನೋಡು. ಅಬ್ಬಬ್ಬ....ಬಿಸಿಲು ಮಹರಾಯ ದಾರೀಲೆ ನಿಂತು ಏನು ನಮ್ಮ ಮಾತು ನಡಿ—ಆ ವಾಸಪ್ಪನ ಹೋಟಲಿಗೆ ಹೋಗಿ ಕೂಡೋಣ....ಬಹಳ ಇದೆ ಹೇಳೋದು....ನಡಿ" ಎಂದು ದಬ್ಬಿಕೊಂಡು ಎಳೆದುಕೊಂಡೇ ಹೋದ. ಒಂದೊಂದು ಸಾರಿ ಈ ಸಾಂಬು ಶುದ್ಧ ಎಳೆ ನಿಂಬೆ ಹಾಗೆ ಆಡುತ್ತಾನೆ—ಆದರೆ ಕೆಲವೊಮ್ಮೆ ಪ್ರತಿಭಾವಂತ ಕವಿಯಹಾಗೆ ಕೂಗುತ್ತಾನೆ. ನಿರ್ವಾಹವಿಲ್ಲದೆ ವಾಸಪ್ಪನ ಹೋಟಲಿಗೆ ಹೋದದ್ದಾಯಿತು. ಮೊದಲೆರಡು ಜಹಂಗೀರು ಒಂದು ಸಾದಾ ಒಂದು ಬೆಣ್ಣೆ ಮಸಾಲೆ—ಒಂದೊಂದು ತರಕಾರಿ ಬೋಂಡ—ಒಂದು ಸೋಡ ಒಂದು ಕಾಫಿ ಇಷ್ಟು ಬಿದ್ದಮೇಲೆ ಕುರ್ಚಿಮೇಲೆ ಚಕ್ಕಳಮಕ್ಕಳ ಹಾಕಿ ಕುಂತ. ಧಡೀರ್ ಎಂದು ನನ್ನ ಬೆನ್ನು ಗುದ್ದಿ—" ಎರಡು ಬೀಡ ಒಂದು ಪ್ಯಾಕೇಟ್ ಪ್ಲೇಯರ್ಸ್ ತರಿಸಿ ಬಿಡು, ಇನ್ನು ನನ್ನ ಸಲಹೆ ಮುಂದಿಡುವೆ. ಯಾವ ವಿಷಯವಾದರೂ ಹೊಟ್ಟೆ ತುಂಬಿದಮೇಲೆ ಮಾತಾಡೋಕೇ ಚೆನ್ನ—ಕೇಳೋರಿಗೂ ಹಿತ....ಎಂದು ಬೀಡಾಕ್ಯೂ ಕಾಸೆಳೆದ ನನ್ನಿಂದ. ರಸವತ್ತಾಗಿ ಬಾಯಿತುಂಬಾ ಎಲೆ ಅಡಿಕೆ ತುಂಬಿಕೊಂಡು ಮಧ್ಯೆ ಮಧ್ಯೆ ಆಳವಾಗಿ ಸಿಗರೇಟು ಹೊಗೆ ಕುಡಿಯುತ್ತಾ ಪ್ರಾರಂಭಿಸಿದ ತನ್ನ ಸಲಹೆಗಳನ್ನು ಮುಂಡಿಸೋಕೆ.

"ಇಲ್ಲಿ ಕೇಳೋ....ಕಾಮೋದ್ದೀಪಕ ಸಾಹಿತ್ಯಕ್ಕೆ ಕಲ್ಲುಬೀಳಬೇಕು—ಸಾಹಿತ್ಯ ಸಮಾಜದಲ್ಲಿ ಸಂಭಾವಿತರನ್ನು ಹೆಚ್ಚಿಸುವುದಕ್ಕೆ ಸಹಕಾರಿಯಾಗಬೇಕಲ್ಲದೆ ಮನಸ್ಸಿನ ಕೀಳು ಭಾವನೆಗಳನ್ನು ಉದ್ರೇಕಿಸಿ ಜನತೆಗೆ ಜಡ್ಡು ಹಿಡಿಸಬಾರದು........ಇದಕ್ಕೆ ಸಾಹಿತಿಗಳು ಅನುಸರಿಸಬೇಕಾದ ಕೆಲವು ಕಾರ್ಯಕ್ರಮ ಇಲ್ಲಿ ಮುಂಡಿಸಲಾಗಿದೆ....ಹೀಗಿದೆಯೋ ಪ್ರಾರಂಭಾ .......ಅಂ........"

"ಸೊಗಸಾಗಿ ವಿಷಯಕ್ಕೆ ಪ್ರವೇಶಮಾಡಿದ್ದೀಯ....ಹೂಂ ಆಮೇಲೆ ..."

"ಹಾಲಿ ಪ್ರಕಟವಾಗಿರುವ ಅಂಥ ಸಾಹಿತ್ಯದ ಸಮಗ್ರ ಪಟ್ಟಿ ತಯಾರಿಸಿ—ಅವರ ಲೇಖಕರಲ್ಲಿ ಹೋಗಿ—ಆ ಪುಟಗಳನ್ನು ತಿದ್ದಿ ಬರೆಯಂತೆ ಕೇಳುವುದು....

ಅವರು ಅದಕ್ಕೆ ಒಪ್ಪದಿದ್ದರೆ ಆ ಪುಟಗಳನ್ನು ಪ್ರತ್ಯೇಕ ಪ್ರಕಟಿಸಿ—ಇವು ಹಾನಿ ಕರ ಓದಬೇಡಿ, ಎಂದು ಜನರಲ್ಲಿ ಪ್ರಚಾರಮಾಡಬೇಕು. ಒಂದು ಪಕ್ಷ ಬರೆದ ಮಹಾನುಭಾವ ಹರಹರ ಎಂದಿದ್ದರೆ ನಿಪುಣರ ಸಮಿತಿಯೊಂದನ್ನು ರಚಿಸಿ ಅವ ರಿಂದ ಆ ಪುಟಗಳನ್ನು ತಿದ್ದಿಸಿ ಬರೆಯತಕ್ಕದ್ದು...... ಹೇಗಿದೆ........"?

"ಶಹಬ್ಬಾಷ್....... ಸಾಗಲಿ ಸಲಹೆ........"

"ಬೇಲೂರು ಹಳೇಬೀಡು ಮುಂತಾದ ಗುಡಿ ಗೋಪುರಗಳಲ್ಲಿನ ಶಿಲ್ಪಿ ಗಳಿಂದ ಕನ್ನಡಿಗರಲ್ಲಿನ ಕೀಳುಭಾವನೆ ಚೇತನಗೊಳ್ಳುವುದರಲ್ಲಿ ಸಂದೇಹವಿಲ್ಲ—ಅಲ್ಲಿನ ಮತ್ತು ಇನ್ನಿತರ ಕಡೆಗಳಲ್ಲಿನ ಬೆತ್ತಲೆ ಬೊಂಬೆಗಳನ್ನು ತೆಗಿಸಿ ಅದರ ಬದಲು ಸಂಭಾವಿತ ಕೆತ್ತನೆಗಳನ್ನಿಡಿಸಬೇಕು—ಅದು ಸಾಧ್ಯವಿಲ್ಲದಿದ್ದರೆ—ಅವುಗಳಿಗೆ ಸೂಕ್ತ ಉಡಿಗೆಯ ವ್ಯವಸ್ಥೆಗೆ ಏರ್ಪಡಿಸಬೇಕೆಂದು ಮುಜರಾಯಿ ಇಲಾಖೆಗೆ ಅರ್ಜಿ ಗುಜರಾಯಿಸತಕ್ಕದ್ದು....ಇದು ಎರಡನೇ ಸಲಹೆ .. ಹೇಗಿದೆ?"

"ಮೆಚ್ಚಿದೆನು ಮಗನೆ....ಹಾ ಹೇಳು ಮುಂದೆ ಸ್ವಾರಸ್ಯವಾಗಿದೆ...."

"ಭರತೇಶ ವೈಭವ—ಮುಂತಾದ ಪ್ರಾಚೀನ ಕಾವ್ಯಗಳಲ್ಲಿನ ಕಾಮೋ ದ್ದೀಪಕ ಭಾಗವನ್ನು ತಿದ್ದಿ ಬರೆಸಬೇಕು—ಇಲ್ಲವೆ ಆ ಪ್ರತಿಗಳನ್ನೆಲ್ಲಾ ಕಲೆ ಹಾಗಿ ಆ ಭಾಗವನ್ನು ನಾಶಮಾಡಬೇಕು ಕುಮಾರವ್ಯಾಸನ ಪದ್ಯ ಒಂದರಲ್ಲಿ 'ವಿರಹಿಗಳ ಶೃಂಗಾರ' ಎಂದು ಹೇಳಿರುವುದರಿಂದ ಜನತೆಗೆ ಒಳ್ಳೆತನಕ್ಕೆ ಧಕ್ಕೆ ಬರುವ ಅಂಶ ಅದರಲ್ಲಿ ಅಡಗಿರಬಹುದು ಆದ್ದರಿಂದ .. ಸಾಹಿತಿ ಸಂಘದವರು ಆ ಪದ್ಯವನ್ನೂ ಭಾರತದಲ್ಲಿ ಅಂಥ ಭಾಗಗಳನ್ನೂ ಕತ್ತರಿಸಿ ಕಿತ್ತೊಗೆದು-ಕನ್ನಡಿ ಗರನ್ನು ಉದ್ಧಾರಮಾಡಬೇಕು...."

"ಭಲಾ ಭಲಾ .. ಏನು ಸಲಹೆ! ಏನು ಸಲಹೆ... ಹೂಂ ಅಮೇಲೆ?...."

"ಇಂಥಾ ಸಾಹಿತ್ಯ ನಿಲ್ಲಿಸಲು ಸಾಧ್ಯವಿಲ್ಲವೆಂದು ಹೇಳುವ ಬರಹಗಾರರಲ್ಲಿ ಬೇಡಿಕೆಯಿಂದ ಆಗದ ಕೆಲಸಕ್ಕೆ ಅವರ ಮನೆ ಮುಂದೆ ಸತ್ಯಾಗ್ರಹ ಮಾಡಬಲ್ಲ ಹುರಿಯಾಳುಗಳನ್ನು ತಯಾರಿಸಬೇಕು... ಕವಿಗಳು ಆದಷ್ಟು ತತ್ವ ವಿಚಾರ—ಸಾತ್ವಿಕರ ವಿಚಾರ ವೇದಾಂತ ವಿಚಾರವಾಗಿ ಪದ್ಯ ಬರಿಯಬೇಕು. ಪ್ರೇಮಿ ಗಳ ವಿಷಯ ಬರೆದ ಕವನವನ್ನು ವಿಜ್ಞಾನರ ಸಮಿತಿಯೊಂದರ ಅನುಮೋದನೆಗೆ ಒಳಪಡಿಸಬೇಕು........ಹೇಗಿದೇಮ್ಮಾ ನನ್ನ ಸಲಹೆಗಳು.... "

"........ಚೆನ್ನಾಗಿವೆ ಹುಚ್ಚಾಸ್ಪತ್ರೆ........"

"ನಿನಗೆ ತಮಾಷೆಕಣೋ....ನಿಜವಾಗಿ ಇಂದಿನ ಸಮಾಜದಲ್ಲಿ ಏನಾದರೂ ಒಳ್ಳೆದೊ, ಕೆಟ್ಟದೋ ಆಗುತ್ತಿದ್ದರೆ ಅದಕ್ಕೆ ಸಾಹಿತಿಯೇ ಕಾರಣ...."

"ಬೆಪ್ಪೇ....ಬರಿಯೋನಿಗೆ ಇಂಥದೇ ಬರಿ....ನಗೋ ಸಾಹಿತ್ಯ ಬೇಡ ಅಳೋ ಸಾಹಿತ್ಯ ಬರೀಂದ್ರೆ ಆಗತ್ತೇನೋ....ಅವನವನ ಸಂಸ್ಕಾರ ಅವನವನ ಮನೋಬಲ ಅವನ ಕರ್ಮಾನುಸಾರ ಬರ್ಕೊಳ್ಳಿ ನೀನ್ಯಾಕೋ ಅವನಿಗೆ ಇಂಥದೇ ಬರೀಂತ ಬೊಗಳೋಕೆ ಹೋಗ್ತಿಯಾ...."

"ಇಲ್ದಿದ್ರೆ ಜನ ಕೆಟ್ಟುಹೋಗ್ತಾರಲ್ಲಯ್ಯಾ ಆ ಕಥೆ ಓದೀ....ಅದಕ್ಕೆ ಜನಗಳನ್ನ ಕೆಡಿಸೋಕೆ ಬರೀ ಸಾಹಿತ್ಯ ಒಂದೇ ಅಲ್ಲ ಅದಕ್ಕಿರೋ ನಾನಾ ಕಾರಣಗಳನ್ನೂ ನಾಶಮಾಡೋಕೇ ನನ್ನ ಸಲಹೆ ತಯಾರುಮಾಡಿರೋದು....ಹಾಗೇ ಮುಂದುವರಿದು-ವಸಂತಕಾಲ-ಚಂದ್ರಚಕೋರ-ಅರಳಿದ ವನಸುಮ-ಇವೆಲ್ಲಾ ಕಣ್ಣಿಗೆ ಬೀಳದಂತೆ ಏರ್ಪಾಟು ಮಾಡಬೇಕು....ಅದರಂತೆ ನಡಕೊಂಡರೆ—ಕನ್ನಡದ ಜನ ಕಸ್ತೂರಿ ಮಂದಿಯಾಗೋಲ್ವೆ....ಆಂ?"

"ಅಯ್ಯೋ....ಮುಂಕೆ....ನಿನ್ನ ಬುದ್ಧಿಗೆ ಇಷ್ಟು ಬೆಂಕಿಬಿತ್ತು....ಮಾಡೋಕೆ ಕೆಲಸವಿಲ್ಲದ ನಿನ್ನಂಥವನು ಮಾಡಿದ ಸಲಹೆ ಕಸದ ಬುಟ್ಟಿಗೆ ಲಾಯಖ್ಖು...."

"ಈ ಸಲಹೆ ಕೇಳದಿದ್ದರೆ—ಅಂಥವರಿಗೆ ಸಾಹಿತಿ ಪಟ್ಟದಿಂದ ತೆಗೆದು ಹೊರಗೆ ಹಾಕೋ ಠರಾವನ್ನ ಮುಂದಿನ ಸಮ್ಮೇಳನದಲ್ಲಿ ತರಬೇಕು... "

"ಹಾಗೇ ಮಾಡುವಂತೆ....ಸದ್ಯ... ನಡಿ ಹೊರಡೋಣ...."

ಎಂದು ಸಾಹಿತಿ ಸಾಂಬಶಿವನನ್ನು ಎಳೆದುಕೊಂಡು ಬರಬೇಕಾದರೆ ಮತ್ತೊಂದು ಮಸಾಲೆ ಬೀಳಬೇಕಾಯಿತು. ಅವ ಜೈ ಹಿಂದ್ ಎಂದು ಹೊರಟಾಗಲೇ ನನಗೆ ಸಧ್ಯ ಬದುಕಿದೆ ಎಂದು ಧೈರ್ಯ ಬಂತು. ಸಾಹಿತಿ ಸಾಂಬಶಿವನ ಸಲಹೆಗೆ ಹಣೆಹಣೆ ಬಡಿದುಕೊಂಡೆ. ಮರುಕ್ಷಣವೇ ಅನ್ನಿಸಿತು ಅವನ ಸಲಹೆ ಮುಂದಿನ ಸಮ್ಮೇಳನದಲ್ಲಿ ಠರಾವಾಗಿ ಪಾಸಾದರೂ ಆಶ್ಚರ್ಯವೇನಿಲ್ಲ........ಎಂದು.

—ದಾಶರಥಿ ದೀಕ್ಷಿತ್.

---

(ಯುವಕ-ಪ್ರತಿಭಾಶಾಲಿ-ಮಾತುಗಳನ್ನು ಹೆಣೆಯಬಲ್ಲ—ಆದರೆ-ರೆ-ರೆ-ಅನುಭವ ಸಾಲದು—ಈತನ ಹುಮ್ಮಸ್ಸೂ, ಕೆಚ್ಚೂ ಚೆನ್ನು—ಜೀವನ ಪರಿಚಯ ಸಾಕಷ್ಟು ಆದಮೇಲೆ, ಬಲು ಚೆನ್ನು ಆಗುತ್ತಾನಲ್ಲವೇ? —ಸಂ.)

# ಫುಟ್ ಪಾತ್

ಕೊನೆಗೂ ನಮ್ಮ ಬೀದಿಗೆ ಫುಟ್‌ಪಾತ್ ಬಂತು. ನೂರಾರು ಜನ ನಾವು ಹತ್ತಾರು ತಿಂಗಳು ಶ್ರಮಪಟ್ಟು, ತರಿಸಿದೆವು. ಮೊನ್ನೆ ಅದರ ಪ್ರಾರಂಭೋತ್ಸವವನ್ನೂ ವಿಜೃಂಭಣೆಯಿಂದ ನೆರವೇರಿಸಿಬಿಟ್ಟೆವು. ಆಚೆ ಬೀದಿಯ ಫುಟ್‌ಪಾತನ್ನು ಉದ್ಘಾಟಿಸಿದ ಶ್ರೀ........ರಿಗಿಂತ ದೊಡ್ಡ ಶ್ರೀ ಶ್ರೀ........ಯಿಂದಲೇ ಭಾಷಣ ಏರ್ಪಾಟು ಮಾಡಿದ್ದೆವು. ರಾತ್ರಿ ಭೋಜನ ಕೂಟಕ್ಕೂ ಅವರು ಬಂದಿದ್ದರು; ಆಚೆ ಬೀದಿ ಕಾಲುದಾರಿ ಪ್ರಾರಂಭಿಸಿದ ದೊಡ್ಡ ಮನುಷ್ಯ ಅವರ ಭೋಜನ ಕೂಟವನ್ನು ಖಂಡಿಸಿ "ಈಗಿನ ಆಹಾರಾಭಾವ ಕಾಲದಲ್ಲಿ...." ಎಂದು ಮುಂತಾಗಿ ಹೇಳಿದ್ದರಂತೆ. ಆದರೆ, ನಮ್ಮವರು ಅವರಿಗಿಂತ ಮರ್ಯಾದಸ್ಥರು, ಸಭ್ಯರು; ಜೊತೆಗೆ ತಾವೇ ಇಪ್ಪತ್ತು ಮೂವತ್ತು ಜನ ತಮ್ಮ ಅನುಯಾಯಿಗಳನ್ನೂ ಕರೆದುಕೊಂಡು ಬಂದು, ಹೇಳದೆ ಕೇಳದೆ, ಊಟಕ್ಕೆ ಕೂತು, ಪರಿಷ್ಕಾರವಾಗಿ ಹೊಡೆದರು.

ನಿಮ್ಮ ಬೀದಿಗೆ ಫುಟ್‌ಪಾತ್ ಇಲ್ಲವೇನು, ಇನ್ನು? ಅಯ್ಯೋ! ಹಾಗಾದರೆ, ಏಕೆ ಸುಮ್ಮನಿದ್ದೀರಿ? ಪ್ರಾರಂಭಿಸಿ, ಚಳುವಳೀನ, ಈಗ ನೋಡಿ, ಈ ಫುಟ್‌ಪಾತ್ ಬಂದಾಗ ನಮ್ಮ ಮನೆ ಮಕ್ಕಳುಗಳನ್ನೆಲ್ಲ, ಕಾರು ಲಾರಿ ಗಾಡಿ ಇತ್ಯಾದಿಗಳಿಂದಾಗಬಹುದಾದ ಅನಾಹುತಗಳ ಭಯವಿಲ್ಲದೆಯೆ, ಬೆಳಗ್ಗೆ ಏಳುತ್ತಲೂ, ಕೂಡಿಸುವುದಕ್ಕೆ ಒಂದು ಮುನಿಸಿಪಲ್ ಜಾಗ ಸಿಕ್ಕಿತು, ನಮಗೆ ಇಟ್ಟಿಗೆ ಚಪ್ಪಡಿ ಕಲ್ಲು, ಗಾರೆ, ಸೌದೆ ಇತ್ಯಾದಿ ಸಾಮಾನುಗಳನ್ನು ಮನೆಗೋಸ್ಕರ ತಂದರೆ, ಅವುಗಳನ್ನು ತಿಂಗಳುಗಟ್ಟಲೆ ಇರಿಸಿಕೊಳ್ಳೋದಕ್ಕೆ ಬಾಡಿಗೆ ಇಲ್ಲದೆ ಸ್ಥಳ ಸಿಕ್ಕಿತು. ಮನೆ ಎಮ್ಮೇನ ತೊಳೆಯಬೇಕು ಅಂದ್ರೆ, ಇನ್ನು ಮೇಲೆ ನಮ್ಮ ಕಾಪೌಂಡ್‌ನ ಕೊಳೆ ಮಾಡಬೇಕಾಗಿಲ್ಲ. ಜಟಕಾ ಕುದುರೇಗೆ ಮಾಲೀಸ್ ಮಾಡುವುದಕ್ಕೆ, ಆಚೆ ಬೀದೀಲಿ ಏನು ಮಾಡುತ್ತಾರೆ, ನೋಡಿದಿರೇನು? ಹಿಂಗಾಲನ್ನು ಎಳೆದುಕಟ್ಟಿ, ಫುಟ್‌ಪಾತಿಗೆ ಅಡ್ಡ ನಿಲ್ಲಿಸಿ, ತಿಕ್ಕುತ್ತಾರೆ. ವೈನ. ಫುಟ್‌ಪಾತ್‌ನ ಅಗಲವೂ ಕುದುರೆಯ ಉದ್ದವೂ ಒಂದೇ ಲೆಕ್ಕಾಚಾರ. ಕಾರು ಲಾರಿ ಇವುಗಳಿಗೆ ನೀರು ಹಾಕಬೇಕಾದರೂ, ಅಷ್ಟೆ. ಫುಟ್‌ಪಾತ್ ಇದ್ದೇ ಇದೆ. ನಮ್ಮ ಬೀದಿಲಿ ಲಾರಿಗಳು ಹೆಚ್ಚು; ಅದಕ್ಕೋಸ್ಕರ ನಾವು ಪಕ್ಕಾ ಕೆಲಸವನ್ನೇ ಮಾಡಿಸಿಕೊಂಡಿದೇವೆ. ಫುಟ್‌ಪಾತ್ ಎಲ್ಲ ಚಪ್ಪಡಿ

ಹಾಕಿಸಿ ವಾಟ ಸರಿಯಾಗಿ ಕೊಡಿಸಿದ್ದೇವೆ. ಇನ್ನು ಮೇಲೆ, ನಮ್ಮ ಬೀದೀಲಿ ಕಟ್ಟುವ ಮನೆಗಳಿಗೆ ಗರಾಜೇ ಬೇಕಿಲ್ಲ. ಫುಟ್‌ಪಾತ್ ಅಷ್ಟು ಅಗಲವಾಗಿದೆ; ಮಳೆ ಬಿಸಿಲಿಗೆ, ಗೌನ್ ಹೊಲಿಸಿ ಹೊದ್ದಿಸಿದರಾಯಿತು

ಇನ್ನು, ಈ ಹೊಸ ಏರ್ಪಾಟಿನಿಂದ, ವ್ಯಾಪಾರಿಗಳಿಗೆ ಎಷ್ಟು ಅನುಕೂಲ ನೋಡಿರಿ .. ಅಂಗಡಿ ಬಾಡಿಗೆ ಹೆಚ್ಚುತ್ತಿರುವ ಈ ಕಾಲದಲ್ಲಿ, ಚಕ್ರದ ಗಾಡಿಗಳನ್ನು ಮಾಡಿಕೊಂಡು, ಅವುಗಳಲ್ಲಿ ಹಣ್ಣು ಹಂಪಲು, ಬಳೆ ರಿಬ್ಬನ್, ಬಿಸ್ಕತ್ತು, ಇತ್ಯಾದಿ ತುಂಬಿ, ಫುಟ್‌ಪಾತ್ ಮೇಲೆ ನಿಲ್ಲಿಸಿ, ಆರಾಮವಾಗಿ ಮಾರಬಹುದು. ಕಡಲೆಕಾಯಿಯವರು ಕೂತುಕೊಳ್ಳಬಹುದು. ಹೋಟಲುಗಳಾದರೆ, ನೂರೆಂಟು ರೂಲುಗಳು, ರಾದ್ಧಾಂತಗಳು. ಫುಟ್‌ಪಾತ್ ಮೇಲೇನೇ ಒಂದು ಒಲೆ ಉರಿಸಿ, ಅಲ್ಲೇ ಕರಿದುಕೊಡುವ ವಡೆ, ಸುಟ್ಟುಕೊಡುವ ಮುಸುಕಿನ ಜೋಳ, ಹುಯ್ದು ಕೊಡುವ ದೋಸೆ, ಇವುಗಳ ತಂಟೆಗೆ ಯಾರೂ ಬರುವಂತಿಲ್ಲ, ನಮ್ಮೂರಲ್ಲಿ. ಧೂಳು ಕಸ ಮಲ ತುಂಬಿ ಆರೋಗ್ಯಕ್ಕೆ ಧಕ್ಕೆ ಅಂತೀರೇನು? ಊರಿನಲ್ಲಿರುವ ಡಾಕ್ಟರುಗಳಿಗೆ ವರಮಾನ ಹೆಚ್ಚಿದರೆ ನಿಮಗೆ ಹೊಟ್ಟೆಕಿಚ್ಚೇನು? ಮಕ್ಕಳು ಮರಿ ಮುದುಕರು ಮೋಟರು, ನಡುರೋಡಲ್ಲೇ ನಡೆದು, ಮೋಟರಿಗೆ ಸಿಕ್ಕಿ ಕೈಕಾಲು ಮುರಿದುಕೊಳ್ಳುತ್ತಾರೆ, ಅಂತೀರೇನು? ಬಿಡಿ, ಬಿಡಿ, ನಮ್ಮ ನಮ್ಮ ತಾಪತ್ರಯವೇ ನಮಗೆ ಸಾಕಾದಷ್ಟಿರುವಾಗ, ಅವರಿವರ ಗೋಳು ನಮಗೇಕೆ?

—ನಾರಣಪ್ಪ.

---




"ಈ ಹಾಳು ರೈಲುಗಳನ್ನು ನಂಬುವುದಕ್ಕೇ ಆಗುವುದಿಲ್ಲ—
ಈವತ್ತು ಸರಿಯಾಗಿ ಬಂದು ಹೋಗಿಬಿಟ್ಟಿದೆ!"

# ನಂಬಲೇಬೇಕು

---

ಅವನು ಒಬ್ಬ ಬಾತ್ಮಿಯಾಗಿರಲಿ, ವಿಶೇಷ ಬಾತ್ಮಿಯಾಗಿರಲಿ, ಸ್ವಂತ ಬಾತ್ಮಿ ಯಾಗಿರಲಿ, ಬರಿಯ ಬಾತ್ಮಿದಾರನ ಮಾತನ್ನು ಯಾರೂ ನಂಬುವುದಿಲ್ಲ. ಆದ್ದರಿಂದ, ಈಚೆಗೆ ಅವರು ತಮ್ಮ ಊಹಾಪೋಹೆಗಳನ್ನು ಜನರು ನಂಬುವಂತೆ ಅನೇಕ ಉಪಾಯಗಳನ್ನು ಹುಡುಕ ಬೇಕಾಗಿದೆ. ಅಲ್ಲದೆ, ತಮಗೆ ದೊರೆತ ಸುದ್ದಿಯನ್ನು ಪ್ರಕಟಿಸುವಾಗ, ಆ ಸುದ್ದಿಗಳು ನಂಬಲರ್ಹವಾದವು, ಎಂದೆನಿಸಲು ಹಲವು ಪದಸರಣಿಗಳನ್ನು ಅವರು ಜೋಡಿಸಬೇಕಾಗಿದೆ. ಉದಾಹರಣೆಗೆ:-

(೧) ಅಧಿಕೃತ ವಲಯಗಳಿಂದ ತಿಳಿದು ಬಂದಿದೆ: ಎಂದರೆ, ಆಫೀಸ್ ಜವಾನ ಅಥವ, ದಫೇದಾರ.

(೨) ಅಧಿಕೃತ ವಕ್ತಾರರಿಂದ ಹೊರಗೆಡಹಲ್ಪಟ್ಟಿದೆ: ಎಂದರೆ, ಆಫೀಸ್ ಗುಮಾಸ್ತೆ ಒಬ್ಬ ಬಸ್‌ನಲ್ಲಿ ಪಿಸುಗುಟ್ಟುತ್ತಿದ್ದ.

(೩) ಅಧಿಕೃತ ವಠಾರಗಳಲ್ಲಿ ಪ್ರಕಟವಾಗಿದೆ: ಎಂದರೆ, ಆಫೀಸರ್ ವಾಸವಾಗಿರುವ ಬಂಗಲೆಯ ಔಟ್‌ಹೌಸಿನಲ್ಲಿ ಬಾಡಿಗೆಗಿರುವವರು ಹೇಳುತ್ತಿದಾರೆ, ಅಥವ ಸಾಹೇಬರ ಕಾರ್ ಡ್ರೈವರನ ಮೊಮ್ಮಗ ತೊದಲುತ್ತಿದ್ದ.

(೪) ನಂಬಲರ್ಹವಾದ ಕಡೆಗಳಿಂದ ತಿಳಿದು ಬಂದಿದೆ: ಎಂದರೆ ಸಾಹೇಬರ ಅಮ್ಮಾವರು ದೇವಸ್ಥಾನದಲ್ಲಿ ಜಂಬ ಕೊಚ್ಚಿ ಕೊಳ್ಳುತ್ತಿದ್ದರು, ಅಥವ, ಮಂತ್ರಿಗಳೊಬ್ಬರ ಚುನಾವಣಾ ಏಜಂಟೊಬ್ಬರ ಭಾವಮೈದುನ ತನ್ನ ಭಾವ ಮೈದುನನಿಗೆ ಪತ್ರ ಬರೆದಿದ್ದ, ಅಥವ, ಸಾಹೇಬರ ಜೋತಿಷ್ಯಕಾರ ಗುಟ್ಟಾಗಿ ಹೇಳಿದ ಸಮಾಚಾರ.

(೫) ವಿಶ್ವಾಸ ಯೋಗ್ಯವಾದ ಸುದ್ದಿ ಬಂದಿದೆ: ಎಂದರೆ, ಸಾಹೇಬರ ಮಗಳು ಮಿಡ್ಲ್ ಸ್ಕೂಲಿನ ತನ್ನ ಗೆಳತಿಗೆ ಹೇಳಿದ ಮಾತು ಆಕೆಯ ತಂಗಿ ಹೊರಗೆಡಹಿದ್ದಾಳೆ.

(೬) ಎಲ್ಲರೂ ಮಾತನಾಡುತ್ತಿದಾರೆ: ಎಂದರೆ, ಸಾಹೇಬರ ಇಸ್ಪೀಟ್ ಸ್ನೇಹಿತರೊಬ್ಬರು ಹೇಳಿದರು.

(೭) ಸರ್ವರಿಗೂ ತಿಳಿದ ವಿಷಯವಾಗಿದೆ: ಎಂದರೆ, ಸಾಹೇಬರು ವಾಕಿಂಗ್ ಹೋಗುವ ಪಾರ್ಕಿನ ಮರ ವೊಂದರಲ್ಲಿ ಗೂಡು ಕಟ್ಟಿರುವ ಪಕ್ಷಿ ಹೇಳಿದ್ದು.

(೮) ಇಷ್ಟರಲ್ಲೇ ಹೊರಬೀಳಲಿದೆ: ಎಂದರೆ, ಯಾರಿಗೂ ತಿಳಿಯದ ಈ ಸುದ್ದಿ ತನ್ನ ಪೇಪರಲ್ಲಿ ಪ್ರಕಟವಾಗಲಿದೆ.

(೯) ನಿನ್ನೆ ಪ್ರಕಟವಾಯಿತಂತೆ: ಎಂದರೆ, ಹೀಗಾದರೆ, ಜನಾಭಿಪ್ರಾಯ ಹೇಗೆ ರೂಢಿಗೊಳ್ಳುವುದೋ ನೋಡೋಣ ಎಂದು ಬಾತ್ಮಿದಾರನು ಕುತೂಹಲನಾಗಿದಾನೆ, ಅಥವ, ಈ ಸುದ್ದಿಯನ್ನೋದಿ, ಅದನ್ನು ಸುಳ್ಳಾಗಿಸಲು ಹಲವರು ಪ್ರಯತ್ನಿಸಲಿ, ಎಂದು ಬಾತ್ಮಿದಾರ ಇಚ್ಛೆ ಪಡುತ್ತಿದಾನೆ.

(೧೦) ನಾನು ಕಂಡಿತವಾಗಿ ತಿಳಿಸಬಲ್ಲೆ : ಎಂದರೆ, ನಾಳೆ ಈ ಸುದ್ದಿ ನಿಜ ಅಂತ ಗೊತ್ತಾದರೆ. ಅದನ್ನು ಮೊತ್ತ ಮೊದಲು ಪ್ರಕಟಿಸಿದ ಹೆಮ್ಮೆ ನನ್ನ ಭಾಗಕ್ಕಿರಲಿ, ಎಂದು ಬಾತ್ಮಿದಾರ ಹುಷಾರಾಗಿದಾನೆ, ಎಂಬುದ್ದೇ ಅರ್ಥ.

★



ಪರದೆ ಯೊಳಗಿನ ಸೊಳ್ಳೆ: "ನೀನು ತಡವಾಗಿ ಬಂದುದರಿಂದ ಪರದೆಯೊಳಗಡೆ ಈ ಮನುಷ್ಯನ ಜೊತೆಯಲ್ಲಿ ಸೇರಿ ಕೊಳ್ಳಲಾಗದೆ, ಈ ದಿನದ ಆಹಾರಕ್ಕೆ ಸೊನ್ನೆಬಿತ್ತು!!"

# ಪುಟ್ಟಮ್ಮಯ್ಯನ ಪತ್ರ

ಚಿ॥ ಸೌ॥ ಹ॥ ಕುಂ॥ ಶೋ ಶ್ಯಾಮಲಳಿಗೆ, ಅನಂತಪುರದಿಂದ ಅಮ್ಮಾ ಮಾಡುವ ಆಶೀರ್ವಾದಗಳು. ಇಲ್ಲಿ ಎಲ್ಲರೂ ಕ್ಷೇಮ. ಅಲ್ಲಿ ನೀನೂ ಅಳಿಯಂದರೂ ಮಕ್ಕಳೂ ನಮ್ಮ ಬೀಗಿತ್ತಿ ಎಲ್ಲರೂ ಕ್ಷೇಮವಾಗಿದ್ದೀರೆಂದು ನಂಬಿದ್ದೀನಿ.

ಮೊನ್ನೆ ನಿಮ್ಮೂರಿನಿಂದ ಸಾತಕ್ಕನ ಸೊಸೆ ಇಲ್ಲಿಗೆ ತೌರುಗಾಣುಕ್ಕೆ ಬಂದಳು ನಿನ್ನೆ ನಮ್ಮ ಮನೆಗೆ ಬಂದಳು ಈ ಸಾರ್ತಿ ಅವಳ ಗಂಡ ಮಾಡಿಸಿ ಕೊಟ್ಟ ಪ್ಯಾಷನ್ ಒಳೆ ನೋಡಿದೆ ಬಲು ಚೆನ್ನಾಗಿತ್ತು ನಿನ್ನ ಕೈ ಮೇಲೆ ಇನ್ನೂ ಚೆನ್ನ ನಿನ್ನವ್ವ ಒಣ್ಣಕ್ಕೂ ಬಂಗಾರದ ಬಣ್ಣಕ್ಕೂ ಬಲು ಚೆನ್ನಾಗಿ ಒಪ್ಪುತ್ತೆ ಅನ್ನಿಸಿತು ಆ ಸಾತಕ್ಕನ ಸೊಸೆ ಕೈಮೇಲೆ ಕೂಡ ಸಾದಿನ ಮೇಲೆ ಚಿಪ್ಪ ಇಟ್ಟಹಾಗೆ ಚೆನ್ನಾಗಿಯೇ ಕಾಣಿಸುತ್ತಿತ್ತು. ಅವಳು ಹೇಳಿದಳು ನಿಮ್ಮ ಮನೆಗೂ ಹೋಗಿದ್ದಳಂತೆ. ನೀವೆಲ್ಲಾ ಹುಷಾರಾಗಿದೀರಿ ಅಂತ. ಅಳಿಯಂದಿರು ಈಗ ಒಂದು ದೊಡ್ಡ ಫೋಟೋ ಸ್ಟುಡಿಯೋ ತೆಗೆದಿದ್ದಾರಂತಲ್ಲ! ಅಲ್ಲಿಗೆ ಹೋಗಿ ಅವಳ ಮಗುವಿನ ಫೋಟೋ ತೆಗಿಸಿಕೊಂಡಳಂತೆ. ಇಲ್ಲಿಗೂ ತಂದು ತೋರಿಸಿದಳು. ಬಲು ಮುದ್ದಾದ ಫೋಟೋ! 'ಆ' ಮಗುವಿನ ಫೋಟೋನೇ ಅಷ್ಟು ಮುದ್ದಾಗಿರುವಾಗ ಸ್ಟುಡಿಯೋದಲ್ಲಿ ಲಾಭ ಹೆಚ್ಚು ಬರುತ್ತಿರಬೇಕು. ಅಂದಹಾಗೆ ಅವಳು ಹೇಳಿದಳು ಸ್ಟುಡಿಯೋದಲ್ಲಿ ಯಾರೋ ಚಟ್ಟೇಗಾರರ ಹುಡುಗಿ ಓಡಾಡ್ತಾ ಇದ್ದಳು ಅಂತ. ಅವಳು ಹೇಳಿದ್ದಕ್ಕಿಂತ ಹೇಳದೇ ಇದ್ದದ್ದೇ ಹೆಚ್ಚಾಗಿತ್ತು. ನಾನೂ ಬಾಯಿಬಿಟ್ಟು ಅವಳನ್ನು ಕೇಳಲಿಲ್ಲ. ಇದರ ಸುದ್ದಿ ನಿನಗೇನಾದರೂ ಗೊತ್ತೆ? ನಾಲ್ಕು ಮಕ್ಕಳ ತಾಯಿ ನೀನು ಈಗ ಹುಷಾರಾಗಿರಬೇಕು. ಅದೂ ಅವರ ಕೈಲಿ ನಾಲ್ಕು ಕಾಸು ಕುಣಿದಾಡುತ್ತಾ ಇದ್ದರೆ ಇನ್ನೂ ಹುಷಾರಾಗಿರಬೇಕು ಇದ್ದ ಹಣಕ್ಕೆಲ್ಲಾ ಅದೂ ಇದೂ ಒಡವೆ ವಸ್ತ್ರ ಆಸ್ತಿ ಪಾಸ್ತಿ ಮಾಡಿಸು. ಸಾಲ ಮಾಡಿಯಾದರೂ ಹೀಗೆ ಮಾಡುವಂತೆ ನೀನು ಮಾಡಬೇಕು ಆಗ ಬಂದ ಹಣ ಸಾಲಕ್ಕೆ ಕಟ್ಟಿ ಕೈಲಿ ಕಾಸಿರುವುದಿಲ್ಲ. ಅಂದ ಮೇಲೆ ಅನರ್ಥಗಳು ಆಗುವುದಿಲ್ಲ.

ಸಾತಕ್ಕನ ಸೊಸೆ ಇದನ್ನೂ ಸೂಚಿಸಿದಾಗ, ಎಷ್ಟು ಸಂತೋಷದಿಂದ ಹೇಳಿದಳು ಗೊತ್ತೇ? ಅವರಿದುರಿಗೆ ನಾವು ಎಡವಬಾರದು. ಏನು ಆದರೂ ಗುಟ್ಟಾಗಿಯೇ ಆಗಬೇಕು ಸಂಸಾರ ಗುಟ್ಟು ವ್ಯಾಧಿ ರಟ್ಟು ಗೊತ್ತಿಲ್ಲವೆ?

'ಇವರ' ಹತ್ತಿರ ಮೂರು ದಿನದಿಂದ ಇದೇ ವಿಷಯ ಮಾತನಾಡಿದೆ. ನಿಮ್ಮ ಮನೆಗೆ ಹೋಗಿ ಮೂರು ದಿನ ಇದ್ದು ಆಧಾನ ನಿಧಾನ ನೋಡಿಕೊಂಡು ಬನ್ನಿ ಎಂದು ಎಷ್ಟೋ ಹೇಳಿದೆ. "ಅವರವರು ಹೇಳಿದ್ದು ಕೇಳಿಕೊಂಡು ನಾವು ನೆಮ್ಮದಿ ಕೆಡಿಸಿಕೋಬಾರದು ಹಾಗೆ ಹೀಗೆ ಲೊಟ್ಟೆ ಲೊಸಕು" ಎಂದು ವೇದಾಂತನೇ ಶುರು ಮಾಡಿದರು.

ಅವರಿಗೆ ಹೆದರಿಕೆ, ನೀನು ಎರಡನೇ ಬಾಣಂತನಕ್ಕೆ ಇಲ್ಲಿಗೆ ಬಂದಿದ್ದಾಗ ಅವರಾಡಿದ ಆಟಾನ ಎಲ್ಲಿ ಜ್ಞಾಪಿಸುತ್ತೀನೋ ಎಂಬ ಭೀತಿ ವಯಸ್ಸಾದ ಮೇಲೆ ಅದನ್ನೆಲ್ಲಾ ಜ್ಞಾಪಿಸಿಕೊಂಡು, ಅವರುಗಳ ಮೇಲಿರೋ ಹತೋಟಿನ ಕಳೆದುಕೊಳ್ಳಕ್ಕೆ ನಾನೇನು ಹುಚ್ಚಿಯೇ?

ನಾನೂ ಮಗುಮ್ಮಾಗಿ ಸುಮ್ಮನಾದೆ. ಯಾಕೆ ಹೇಳಕ್ಕೆ ಬಂದೆ ಅಂದರೆ ಗಂಡಸರು ಗಂಡಸರೇ ಒಂದು ಒಬ್ಬರಿಗೊಬ್ಬರು, ನೆರವಾಗ್ತಾರೆ ಇಂತಹ ವಿಷಯಗಳಲ್ಲಿ ಅದಕ್ಕೇ ನಾನು ಈ ಕಾಗದ ಬರೆದಿರೋದು ನಿನಗೆ. ನೀನು ಹುಷಾರಾಗಿರು.

ಆವಾಗ ನಾನೇನು ಮಾಡಿದೆ ಗೊತ್ತೆ? ಮೂರು ವರ್ಷ ಅಮ್ಮನ ಮನೆಗೆ ಹೋಗಲೇ ಇಲ್ಲ. ಅವರೆಷ್ಟೇ ಹೊತ್ತು ಮಾಡಿಕೊಂಡು ಬರಲಿ ಎಚ್ಚರವಾಗಿದ್ದು ಅವರ ಎಲೆಅಡಿಕೆ ಬಾಯಿ ರಂಗು ನೋಡಿದರೂ ಕಾಣದವಳ ಹಾಗೆ, ಎಲೆಹಾಕಿ ಬಡಿಸಲು ಸಿದ್ಧ ಮಾಡುತ್ತಿದ್ದೆ. ನನಗೆ ಸ್ನೇಹಿತರ ಮನೇಲಿ ಊಟ ಆಯಿತು ಅಂತ ಅನ್ನೋರು ಆಗ ನಾನು ಅದೇ ಎಲೇಲಿ ಊಟದ ಶಾಸ್ತ್ರ ಮಾಡುತ್ತಿದ್ದೆ ಎಷ್ಟೋ ಸಾರಿ ಬೆಳಗಿನ ಝಾವ ಮೂರು ಗಂಟೆಗೆ ಈ ಆಟ ಹೂಡಿದ್ದೂ ಉಂಟು. ಒಂದು ಸರ್ತಿಯಾದರೂ ಆ ಹರಿ ಕಥೆ ಹೆಂಗಸಿನ ಮಾತೇ ಎತ್ತಲಿಲ್ಲ. ನಿನಗೆ ಸಂಗೀತ ಹೇಳಿಕೊಡುಕ್ಕೆ ಶ್ಯಾಮಾಚಾರ್ ಬರುತ್ತಿದ್ದರಲ್ಲಾ! ಜ್ಞಾಪಕ ಇದೆಯೇ! ಅವರ ಹೆಂಡತಿ ಸ್ನೇಹ ಬೆಳೆಸಿ, ತಬಲದ ತಮ್ಮಯ್ಯನ್ನ ನಮ್ಮ ಮನೆಗೆ ಬರುವಂತೆ ಮಾಡಿದೆ. ಅವನಿಗೆ ಹೇಳಿಕೊಟ್ಟೆ, ಇವರು ಒಂದು ದಿನ ಮನೆಯಲ್ಲಿರುವಾಗ ಅವ ಬಂದು, "ರಾಯರೇ? ಇವತ್ತು ನಾನೂ ಆ ಹರಿಕಥೆ ಹೆಂಗಸೂ ಜಾಗಿನ ಕಟ್ಟೆಗೆ ಕಾಲಕ್ಷೇಪಕ್ಕೆ ಹೋಗುತ್ತೇವೆ ನಿಮಗೆ ಹೇಳಿಬಿಟ್ಟು ಬಾ ಎಂದು ಹೇಳಿ ಕಳಿಸಿದರು ಆಕೆ ಎಂದು ಹೇಳಿದ ನನ್ನೆದುರಿಗೇನೇ! ನಾನೊಂದು ಮಾತೂ ಆಡಲಿಲ್ಲ ಅವರೇ ಅಂದರು 'ನನಗ್ಯಾಕೆ ಈ ಸುದ್ದಿ ಹೇಳಿ ಕಳಿಸಿದಳು' ಅಂತ. ಆಗ ನಾನಂದೆ ಈ ಕಮಂಗಿಯ ಹತ್ತಿರ ಏಕೆ ಹೇಳಿ ಕಳಿಸಿದಳು. ಅವಳೇ ಬಂದು ಹೇಳಬಹುದಾಗಿತ್ತಲ್ಲ" ಅಂತ. ಗಂದಿಗೆ ಅಂಗಡಿ ಪುಟ್ಟಪ್ಪನವರ ಮನೆಗೂ ಇದೇ ರೀತಿ ಹೇಳಿಕಳಿಸಿದ್ದಳು ಇವತ್ತು ಬೆಳಗ್ಗೆ ಅಂತ ಅವರ ಹೆಂಡತಿ ದೇವಸ್ಥಾನದಲ್ಲಿ ಹೇಳಿದರು. ಕಟ್ಟೆಗೆ ಅಂಗಡಿ ಮರಿಶಾಮಿ ಮನೆಗೂ ಇದೇ ರೀತಿ ಹೇಳಿ ಕಳಿಸಿದ್ದಳು ಅಂತ. ಮರಿಶಾಮಿ ಹೆಂಡತಿ ರೇಷ್ಮೆ ಅಂಗಡಿ ಹತ್ತಿರ ಹೇಳಿದಳು ಅಂತ ಕೂಡಾ ಹೇಳಿದೆ.

ಅವತ್ತಿಂದ ನೋಡು! ಸಭ್ಯಸ್ಥರಂತೆ ಇಷ್ಟು ದಿನವೂ ಇದ್ದಾರೆ. ನನ್ನ ಮಗಳು ಅಂದ ಮೇಲೆ ಹೆಚ್ಚಿಗೆ ಬರೆಯ ಬೇಕಾದ್ದೇನಿದೆ.

ಆಶೀರ್ವಾದಗಳು,

ಪುಟ್ಟಮ್ಮಯ್ಯ.

# ದುರ್ಯೋಧನ ಈಗ ಬದುಕಿದ್ದಿದ್ದರೆ:—

---

ಅಲ್ಲಾ! ಆಗಿನ ಕಾಲದಲ್ಲಿ ದುರ್ಯೋಧನ ಎಷ್ಟು ಕಷ್ಟ ಪಟ್ಟಾ ಅಂತೀರಿ? ದಾಯಾದಿಗಳು ಅಲ್ಪ ಸಂಖ್ಯಾತರಾದರೂ, ಅವರನ್ನು ಮೂಲೆಗೆ ಕೂರಿಸಿ. ಬಹುಮತ ಹೊಂದಿದ ತಾನು ಸುಖವಾಗಿರಲಿಕ್ಕೆ ಆಗಲಿಲ್ಲವಲ್ಲಾ! ಅದೇನೋ ಅರಗಿನ ಮನೆ ಅಂತ ಕಟ್ಟಿಸಿ ದಾಯಾದಿಗಳನ್ನು ಕೂರಿಸಿ ಕಾಮನ ಹಬ್ಬದ ದಿವಸ ಬೆಂಕಿ ಬಿತ್ತು ಎಂದು ಲಬೋ ಲಬೋ ಅಂತ ಮೊಸಳೆ ಕಣ್ಣೀರಿಟ್ಟ ಹಾಗೆ, ಅತ್ತ. ಅವರು ಸತ್ತಿಲ್ಲ ಬೇರೆ ಕಡೆಗೆ ತಪ್ಪಿಸಿಕೊಂಡು ಹೋಗಿ ಸುಖವಾಗಿದಾರೆ ಅಂದಾಗ ತಿರುಗಿ ಅತ್ತ ದುಃಖವಾಗಿ ಏಕಚಕ್ರಪುರಿಗೆ ಹೋಗಿದ್ದಾರೆ ಪರವಾಗಿಲ್ಲ. ನಮ್ಮ ಬಕಾಸುರ ನೋಡಿಕೊಳ್ಳುತ್ತಾನೆ ಅಂತ ಸಂತೋಷವಾಗಿದ್ದರೆ, ಬಕಾಸುರನೇ ಫಟ್ಟ ಅಂತ ಕೇಳಿ ತಿರುಗಿ ಅಳುಮೊಗನಾದ. ಭೀಮನಿಗೆ ವಿಷ ಉಣ್ಣಿಸಿದರೆ ಅದರಲ್ಲೇ ಅವ ಜೈಸೆಪ್ಸ್ ಬೆಳಸಿಕೊಂಡ. ಏನೇನು ಮಾಡಿದರೂ ಪಾಪ! ಕಡೆಗೆ ತೊಡೆ ಮುರಿಸಿಕೊಂಡು ಹರೋ ಹರ ಅಂದ.

ಅವ ಈಗ ಬದುಕಿದ್ದಿದ್ದರೆ ಎಷ್ಟು ಚೆನ್ನಾಗಿತ್ತು ಹುಟ್ಟಿದಾಗ ಅಣ್ಣತಮ್ಮಂದಿರ ಮಕ್ಕಳಾಗಿದ್ದರೂ ಬೆಳೆದ ಮೇಲೆ ದಾಯಾದಿಗಳಾದವರನ್ನು ಎಷ್ಟು ಸುಲಭವಾಗಿ ನಿರ್ಮೂಲ ಮಾಡಬಹುದಾಗಿತ್ತು. ಪಾಪ! ಅವನೂ ಮಾಡಿದ ಪಗಡೆ ಯಾಡೋಣ ಅಂದ-ಪ್ಲೆಬಿಸೈಟ್ ತೆಗೊಳ್ಳೋಣ ಅಂದಹಾಗೆ, ಆದರೂ ಫಲಿತಾಂಶ ಅಂತ್ಯದಲ್ಲಿ ಸುಖವಾಗಲಿಲ್ಲ. ಈಗಿನ ಕಾಲ ಆಗಿದ್ದರೆ, ಪಾಂಡವರನ್ನ ರೇಷನ್ ಕಾರ್ಡು ತನ್ನಿ ಆಮೇಲೆ ಆರು ಔನ್ಸು ಆಹಾರ ನಮ್ಮ ದೇಶದಲ್ಲಿ ಅಂತ ಒಂದು ಹುಕುಂ ಹೊರಡಿಸಿದ್ದರೆ, ಆ ರೇಷನ್ ಕಛೇರೀಲಿ, ಸರಿಯಾದ ವ್ಯವಸ್ಥೆಮಾಡಿದ್ದರೆ, ಇವರಿಗೆ ರೇಷನ್‌ಕಾರ್ಡು ದೊರೆಯೋ ಹೊತ್ತಿಗೆ ಭೀಮಸೇನ ಬೀಮಸೇನ ಆಗಿಬಿಡುತ್ತಿದ್ದ. ಆರು ಜನಕ್ಕೆ ಅಂತ ಬಂದ ಮೂವತ್ತಾರು ಔನ್ಸು ಹಸಿದ ಭೀಮನಿಗೆ ಸಾಲದೆ ಬರುತ್ತಿತ್ತು. ಅಂದ ಮೇಲೆ ನಾಲ್ವರು ಪಾಂಡವರು ಬೀಳೆ ತಿಂದೇ ಜೀವಿಸಬೇಕಾಗಿ ಅತಿಸಾರ ಬಂದು ಅಲ್ಪಾ

ಋಷಿಗಳಾಗುತ್ತಿದ್ದರು. ಇದನ್ನು ನೋಡಲಾರದೆ ಶಾಂತಿ ಕಣ್ಣು ಮುಚ್ಚಿಕೊಳ್ಳುತ್ತಿದ್ದಳು. ಇದನ್ನು ಕಂಡ ಅರೆ ಹೊಟ್ಟೆಯ ವೃಕೋದರ ವಾಯು ದೋಷದಿಂದ ಉಂಟಾದ ಹೊಟ್ಟೆ ನೋವು, ಮನಸ್ಸಿಗುಂಟಾದ ಹೊಟ್ಟೆ ಸಂಕಟ ಇವುಗಳನ್ನು ತಡೆಯಲಾರದೆ ಅವನೂ ಸಮಾಧಿ ಹೊಂದುತ್ತಿದ್ದ. ಅಲ್ಲವೇ?

—ಕುಮಾರ್.

---

ನಿಮ್ಮ ನೆಚ್ಚಿನ ಚಿತ್ರಮಂದಿರಗಳಲ್ಲಿ ನಿರೀಕ್ಷಿಸಿ!




# ಮದುವೆ ಮಾಡಿ ನೋಡು

ನಿರ್ಮಾಪಕರು

## ನಾಗಿರೆಡ್ಡಿ-ಚಕ್ರಪಾಣಿ

ಡೈರೆಕ್ಷನ್

## ಪ್ರಸಾದ್

**Vijaya Talkie Distributors**
**Release.**

# ಕೊರವಂಜಿ

ಬಳೇಪೇಟೆ : : ಬೆಂಗಳೂರು 2

—o—

ಬಿಡಿ ಪ್ರತಿ ಕೇವಲ ನಾಲ್ಕಾಣೆ

ವಾರ್ಷಿಕ ಚಂದಾ: ಕೇವಲ 3 ರೂ.ಗಳು (ಅಂಚೆ ವೆಚ್ಚ ಸಹಿತ)

ನಮ್ಮ ಹೊಸ ಮಾರಾಟಗಾರರು:

Sri. S BHAGAVANTH SHANBHOGHA,
Sri Anjaneya Store,
Saligrama. S. (Kanara)

M/s. D. GANAPATHI RANADE,
Lakkavalli.

M/s. M. R. KESHAVASETTY & BROS.,
Davangere.

Printed by B. S. Iyengar, Bangalore City
Publisher—B. N. Gupta. Editor—M. Sivaram